# ಆಧುನಿಕ ತರ್ಕಶಾಸ್ತ್ರ ಪರಿಚಯ

ಮೊದಲ ವರ್ಷದ ಪ್ರಿ-ಯೂನಿವರ್ಸಿಟಿ ಪಠ್ಯಪುಸ್ತಕ

ಡಾ. ಕೆ.ಬಿ. ರಾಮಕೃಷ್ಣರಾವ್



ಕನ್ನಡ ಅಧ್ಯಯನ ಸಂಸ್ಥೆ : : ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆ
ಪಠ್ಯಪುಸ್ತಕ ಮಾಲೆ—೪೯

ಪ್ರಧಾನ ಸಂಪಾದಕ

ಡಾ. ಹಾ. ಮಾ. ನಾಯಕ

# ಆಧುನಿಕ ತರ್ಕಶಾಸ್ತ್ರ ಪರಿಚಯ

## ಭಾಗ ೧

# ಆಧುನಿಕ ತರ್ಕಶಾಸ್ತ್ರ ಪರಿಚಯ

ಭಾಗ-೧

ಡಾ. ಕೆ. ಬಿ. ರಾಮಕೃಷ್ಣರಾವ್





ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

ADHUNIKA TARKASHASTRA PARICHAYA (Part I)
Dr. K. B. Ramakrishna Rao; Published by the Institute
Kannada Studies, Manasa Gangotri, University of Myso
Mysore-6; First Edition: 1971. pp. viii + 123.





ಬೆಲೆ
ಸಾದಾ ಪ್ರತಿ : ರೂ. 3-50
ಉತ್ತಮ ಪ್ರತಿ : ರೂ. 7-00



ಮಾರಾಟಗಾರರು
ಡೈರೆಕ್ಟರ್
ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬



ಮುದ್ರಕರು
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು-೪

# ಮುನ್ನುಡಿ

ವಿಶ್ವವಿದ್ಯಾನಿಲಯದ ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸಬೇಕೆಂಬ ನೀತಿಗನುಗುಣವಾಗಿ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಕನ್ನಡದಲ್ಲಿ ವಿಜ್ಞಾನ ಮತ್ತು ಮಾನವಿಕ ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಮತ್ತು ಸಂದರ್ಭ ಗ್ರಂಥಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದೆ. ೧೯೬೯-೭೦ ರಲ್ಲಿ ಕೇಂದ್ರ ಸರ್ಕಾರ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿ ಯೋಜನೆಯನ್ನು ಜಾರಿಗೆ ಕೊಟ್ಟಂದಿನಿಂದ, ಈ ಯೋಜನೆಗೆ ಹೆಚ್ಚಿನ ಚಾಲನೆ ದೊರೆತಿದೆ. ಸ್ವತಂತ್ರ ಗ್ರಂಥಗಳನ್ನೂ, ಸಂದರ್ಭ ಮತ್ತು ಆಕರ ಗ್ರಂಥಗಳ ಭಾಷಾಂತರಗಳನ್ನೂ ಹೊರತರಲಾಗುತ್ತಿದೆ. ೧೯೭೧-೭೨ ನೆಯ ಶೈಕ್ಷಣಿಕ ವರ್ಷದಿಂದ ರಾಜ್ಯದಲ್ಲಿ ಎರಡು ವರ್ಷಗಳ ಪ್ರಿ-ಯೂನಿವರ್ಸಿಟಿ ಯೋಜನೆ ಜಾರಿಗೆ ಬಂದಿದ್ದರಿಂದ ಪಠ್ಯಕ್ರಮಕ್ಕನುಗುಣವಾಗಿ ಅಗತ್ಯವಾದ ಗ್ರಂಥಗಳನ್ನು ಹೊರತರುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಡಿಸೆಂಬರ್—ಜನವರಿ ತಿಂಗಳ ಒಳಗಾಗಿ ಆದಷ್ಟು ಮಟ್ಟಿಗೂ ಎಲ್ಲ ವಿಷಯಗಳಿಗೂ ಸಂಬಂಧಿಸಿದ ಪಠ್ಯಪುಸ್ತಕಗಳನ್ನು ಹೊರತರಲು ಸಾಧ್ಯವಾಗಬಹುದೆಂದು ನಂಬಿದ್ದೇವೆ. ಈಗಾಗಲೇ ಸಂಸ್ಥೆ ಹೊರತಂದಿರುವ 'ಜೋಡಿ ದಾಖಲೆ ಪದ್ಧತಿ ಲೆಕ್ಕಬರಹ' ಮತ್ತು 'ಸಂಕ್ಷಿಪ್ತ ವಿಶ್ವ ಇತಿಹಾಸ' ಗ್ರಂಥಗಳು ಕ್ರಮವಾಗಿ ಮೊದಲ ವರ್ಷದ ಪ್ರಿ-ಯೂನಿವರ್ಸಿಟಿ ಲೆಕ್ಕಾಚಾರ ಶಾಸ್ತ್ರ ಮತ್ತು ಇತಿಹಾಸ ವಿಭಾಗಗಳ ಪಠ್ಯಕ್ರಮಗಳಿಗೆ ಅನುಗುಣವಾಗಿದ್ದು ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವಂತಿವೆ.

ತರ್ಕಶಾಸ್ತ್ರ ಪರಿಚಯ (ಭಾಗ ೧) ಈ ಮಾಲೆಯಲ್ಲಿನ ಒಂಬತ್ತನೆಯ ಪುಸ್ತಕ. ಮಾನಸಗಂಗೋತ್ರಿಯ ತತ್ವಶಾಸ್ತ್ರ ವಿಭಾಗದಲ್ಲಿ ಹಿಂದೂ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿರುವ ಡಾ. ಕೆ. ಬಿ. ರಾಮಕೃಷ್ಣರಾವ್ ಅವರು ಪ್ರಿ-ಯೂನಿವರ್ಸಿಟಿಯಲ್ಲಿ ತರ್ಕಶಾಸ್ತ್ರವನ್ನು ಐಚ್ಛಿಕ ವಿಷಯವಾಗಿ ಅಭ್ಯಾಸಮಾಡುವ ಮೊದಲ ವರ್ಷದ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಪಠ್ಯಕ್ರಮಕ್ಕನುಗುಣವಾಗಿ ಈ ಗ್ರಂಥವನ್ನು ರಚಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ವಂದನೆಗಳು. ಈ ಗ್ರಂಥ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗುತ್ತದೆಂದು ನಂಬಿದ್ದೇವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು

ಹಾ. ಮಾ. ನಾಯಕ
ನಿರ್ದೇಶಕ

# ಅರಿಕೆ

ಕನ್ನಡದಲ್ಲಿ ತರ್ಕಶಾಸ್ತ್ರಕ್ಕೆ ಸಂಬಂಧಿಸಿದಂತೆ ಹಲವಾರು ವಿದ್ವಾಂಸರು ಈಗಾಗಲೇ ಗ್ರಂಥಗಳನ್ನು ರಚಿಸಿದ್ದಾರೆ. ಆದರೂ ಆ ಕ್ಷೇತ್ರದಲ್ಲಿ ನನ್ನದೂ ಒಂದು ಪ್ರಯತ್ನ. ಇದೊಂದು ಪರಿಚಯ ಗ್ರಂಥ ಮಾತ್ರ. ಆದಷ್ಟು ಸುಲಭ ರೀತಿಯಲ್ಲಿ ಬರೆಯುವ ಪ್ರಯತ್ನ ಮಾಡಿದ್ದೇನೆ.

ಪಾಶ್ಚಾತ್ಯ ಅಥವಾ ಆಧುನಿಕ ತರ್ಕಶಾಸ್ತ್ರವನ್ನು ಕನ್ನಡಕ್ಕೆ ತರುವ ಪ್ರಯತ್ನದಲ್ಲಿ ಒದಗುವ ಮುಖ್ಯ ತೊಂದರೆ ಅಲ್ಲಿನ ಪಾರಿಭಾಷಿಕ ಶಬ್ದಗಳಿಗೆ ಸಂಬಂಧಿಸಿದ್ದು. ಭಾರತೀಯ ನ್ಯಾಯ ಅಥವಾ ತರ್ಕಶಾಸ್ತ್ರದಲ್ಲಿ ಅವುಗಳಿಗೆ ಸರಿಸಮಾನವಾದ ಶಬ್ದಗಳು ಇಲ್ಲದಿರುವುದ ರಿಂದ, ಇದ್ದರೂ ಕೂಡ ಒಂದೇ ಅರ್ಥದಲ್ಲಿ ಅವುಗಳನ್ನು ಬಳಸಲು ಸಾಧ್ಯವಾಗದೇ ಇರುವುದರಿಂದ ಗ್ರಂಥರಚನೆ ಕಷ್ಟ. ಈಗಾಗಲೇ ಇರುವ ಗ್ರಂಥಗಳ ನೆರವನ್ನು ಪಡೆದು ಅಲ್ಲಿನ ಅನೇಕ ಪಾರಿಭಾಷಿಕ ಶಬ್ದಗಳ ಅನುವಾದ ಇಲ್ಲಿಯೂ ಬಳಸಿದ್ದೇನೆ. ಆದರೆ ಅನೇಕ ಶಬ್ದಗಳು ಹೊಸವು. ಅವುಗಳಿಗೆ ಸ್ವತಂತ್ರವಾಗಿ ಅನುವಾದ ನೀಡಲಾಗಿದೆ. ಈ ಗ್ರಂಥ ವನ್ನು ಬಳಸುವ ವಿದ್ಯಾರ್ಥಿಗಳಿಗೆ ತೊಡಕಾಗದಿರಲೆಂದು ಮೂಲ ಪಾರಿಭಾಷಿಕ ಶಬ್ದ ಗಳನ್ನು ಆವರಣಗಳಲ್ಲಿ ನೀಡಲಾಗಿದೆ. ಬಳಕೆ ಹೆಚ್ಚಿದಂತೆಲ್ಲಾ ನಮ್ಮ ಭಾಷೆಯಲ್ಲೇ ಪರಿಷ್ಕೃತ ರೂಪದ ಪಾರಿಭಾಷಿಕ ಶಬ್ದಭಂಡಾರ ಬೇಗ ಆಗುವುದರಲ್ಲಿ ಸಂಶಯವಿಲ್ಲ, ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಬೆಳೆಯುವುದರ ಮೂಲಕವೇ ಈ ಕೆಲಸ ಆಗಬೇಕಾಗಿದೆ. ಎಲ್ಲ ಶಾಸ್ತ್ರಗಳಿಗೂ ಸಂಬಂಧಪಟ್ಟಂತೆ ಪಾರಿಭಾಷಿಕ ಶಬ್ದಕೋಶ ಬೆಳೆದು ಕನ್ನಡ ಸಂಪನ್ನ ವಾಗಲೆಂಬುದು ಈ ಗ್ರಂಥಕರ್ತನ ಆಶಯ.

ಈ ಗ್ರಂಥರಚನೆಗೆ ಕಾರಣ ಮಾನ್ಯ ಮಿತ್ರರಾದ ಡಾ. ಹಾ. ಮಾ. ನಾಯಕರು. ಅವರಿಗೆ ಈ ಮೂಲಕ ನನ್ನ ವಂದನೆಗಳನ್ನು ಸಲ್ಲಿಸುತ್ತಿದ್ದೇನೆ.

ಈ ಪರಿಚಯ ಗ್ರಂಥದಿಂದ ತರ್ಕಶಾಸ್ತ್ರಾಭ್ಯಾಸಿಗಳಿಗೆ ಪ್ರಯೋಜನವಾದರೆ ನನ್ನ ಪ್ರಯತ್ನ ಸಫಲವಾದಂತೆ.

ಮೈಸೂರು
೨೦-೧೧-೧೯೭೦

**ಕೆ. ಬಿ. ರಾಮಕೃಷ್ಣರಾವ್**

# ಪರಿವಿಡಿ

# ಅಧ್ಯಾಯ 1

# ತರ್ಕಶಾಸ್ತ್ರ—ಸಾಮಾನ್ಯ ಪ್ರಸ್ತಾವನೆ

"An unexamined life is not worth living"

—*Socrates*

## ಮಾನವ ಜೀವನದಲ್ಲಿ 'ವಿಚಾರ'ದ ಸ್ಥಾನ

ಮಾನವ ಜೀವನದಲ್ಲಿ 'ವಿಚಾರ' (reasoning or thinking) ಎನ್ನುವುದಕ್ಕೆ ಬಹು ಮಹತ್ವದ ಸ್ಥಾನವಿದೆ. ಇದು ಮನಸ್ಸಿನ ಕ್ರಿಯೆಗೆ ಸಂಬಂಧಪಟ್ಟದ್ದು, ಮನಸ್ಸಿನ ಉನ್ನತಿಯನ್ನು ತೋರಿಸುವಂತಹ ಒಂದು ಮಾನದಂಡ. ನಾವು 'ನ್ಯಾಯವಂತ' ರಾಗ ಬೇಕು, 'ವಿಚಾರವಂತ'ರಾಗಬೇಕು, ಎಂದು ಅಪೇಕ್ಷೆಪಡುತ್ತೇವೆ. ಎಂದರೆ ಜೀವನ-ಸೂಕ್ಷ್ಮವನ್ನು ಅರಿಯುವ ಮೇಧಾಶಕ್ತಿ ನಮ್ಮಲ್ಲಿ ಬೆಳೆಯಬೇಕು ಎನ್ನುವುದೇ ಆಸೆ. ಇಂತಹ ಮೇಧಾಶಕ್ತಿ ಅಥವಾ ಬುದ್ಧಿಶಕ್ತಿಯನ್ನು ಪಡೆದಿರುವವರನ್ನು 'ವಿವೇಕಿ'ಗಳು ಎಂದು ಕರೆಯುತ್ತೇವೆ, ಇವರ ಮಾರ್ಗದರ್ಶನ ಬೇಕು ಎನ್ನುತ್ತೇವೆ. ಹೀಗೆ, 'ವಿಚಾರ' 'ವಿವೇಕ' ಇವೆರಡೂ ಮನಸ್ಸಿನ ಕ್ರಿಯೆಯ ಆದರ್ಶಸ್ಥಿತಿಗಳೆಂದು ತಿಳಿದುಬರುತ್ತದೆ.

'ವಿಚಾರ' ಎಂದರೇನು ? ಸಾಮಾನ್ಯ ಆಲೋಚನೆ 'ವಿಚಾರ'ದ ಮಟ್ಟಕ್ಕೆ ಏರುವುದು ಹೇಗೆ ? ಸಾಮಾನ್ಯ ಜ್ಞಾನಕ್ಕೂ 'ವಿಚಾರ'ಕ್ಕೂ ಇರುವ ವ್ಯತ್ಯಾಸವೇನು ? ವಿವೇಕಯುತವಾದ ವಿಚಾರಮಾರ್ಗವನ್ನು ನಮ್ಮ ಮಾನಸಿಕ ವೃತ್ತಿಗಳಲ್ಲಿ ಹೇಗೆ ತಂದುಕೊಳ್ಳಬಹುದು ? ಅವುಗಳ ರೂಪಗಳೇನು ? ಅವುಗಳನ್ನು ರೂಢಿಸಿಕೊಂಡಲ್ಲಿ ನಮ್ಮ ಬುದ್ಧಿಕ್ರಮದಲ್ಲಿ ಆಗುವ ಪರಿಣಾಮುಗಳೇನು ? ಇವೇ ಮುಂತಾದ ಅನೇಕ ಅಂಶಗಳನ್ನು ವಿಸ್ತಾರವಾಗಿ, ವೈಜ್ಞಾನಿಕವಾಗಿ ತಿಳಿಯಲು ಅಪೇಕ್ಷೆಪಟ್ಟರೆ ಅಂತಹ ಅಧ್ಯಯನ 'ತರ್ಕ' (Logic ) ಎನಿಸುತ್ತದೆ. ಈ ಅಧ್ಯಯನ ಅಥವಾ ಶಿಕ್ಷಣದಲ್ಲಿ ಪ್ರಾವೀಣ್ಯ ಪಡೆದರೆ ನಾವು 'ವಿಚಾರವಂತ'ರಾಗುತ್ತೇವೆ. ಮನಸ್ಸಿನ ಚಟುವಟಿಕೆಗಳ ದೋಷಗಳನ್ನು ತಪ್ಪಿಸಿಕೊಳ್ಳುವ ವಿಧಾನಗಳನ್ನು ಅರಿತ 'ವಿವೇಕಿ'ಗಳಾಗುತ್ತೇವೆ.

ಹೀಗೆ ಮಾನವನ 'ಅರ್ಥಪೂರ್ಣ' ಜೀವನಕ್ಕೆ ತರ್ಕ ಅಥವಾ ವಿಚಾರದ ಕಾಣಿಕೆ ಬಹಳ. ಎಂದರೆ, ಇದೇ ಮಾನವನನ್ನು ಇತರ ಪ್ರಾಣಿಗಳಿಂದ ಪ್ರತ್ಯೇಕವೆಂದು ಮಾಡುವ ಸಾಧನ. ಅಲ್ಲದೆ, ಮಾನವನ ಸಮಸ್ತ ಜ್ಞಾನ ಅಥವಾ ವಿಜ್ಞಾನ ಸಂಪತ್ತನ್ನು ಬೆಳೆಸಿಕೊಂಡು ಹೋಗುವ ಮತ್ತು ಸುವ್ಯವಸ್ಥಿತಗೊಳಿಸುವ ಆಂತರಿಕ ಶಕ್ತಿ. ಇತರ ಎಲ್ಲ

ಜೀವನ ಕ್ಷೇತ್ರಗಳಲ್ಲೂ—ಸಾಮಾಜಿಕ, ರಾಜಕೀಯ, ನೈತಿಕ, ಧಾರ್ಮಿಕ ಮುಂತಾದ—ವಿವೇಕಯುತವಾದ ಹಾದಿಯನ್ನು ಹಾಕಿಕೊಡುವುದೂ ಇದೇ. ಹೀಗೆಂದಮೇಲೆ, ಮಾನವನು 'ಮಾನವ'ನಾಗಬೇಕಾದರೆ ಅವನಿಗೆ ಅಗತ್ಯವಾಗಿ ದೊರಕಬೇಕಾದ ಶಿಕ್ಷಣ, ಅಥವಾ ವ್ಯಾಯಾಮ, 'ವಿಚಾರ'(thinking )ದ ವೈಜ್ಞಾನಿಕ ಅಧ್ಯಯನದಲ್ಲಿ ಅಡಗಿದೆ. ಈ ವಿಚಾರ ಬಹು ವಿಸ್ತಾರವಾದದ್ದರಿಂದ, ಅದರ ಅಧ್ಯಯನವೂ ವಿಸ್ತಾರವಾಗಬೇಕು. ಆದರೆ ಇಲ್ಲಿ ಕೇವಲ ಮೂಲಭೂತವಾದ ಅಂಶಗಳನ್ನು ಮಾತ್ರ ತೆಗೆದುಕೊಂಡು, ಅವುಗಳ ರೂಪರೇಷೆಗಳನ್ನು ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ. ಇದೊಂದು ಪ್ರಾಥಮಿಕ ಗ್ರಂಥ ಮಾತ್ರ. ಅಭ್ಯರ್ಥಿ ಇದರ ಜಾಡನ್ನು ಹಿಡಿದು ತರ್ಕಕ್ಕೆ ಸಂಬಂಧಪಟ್ಟ ಹಾಗೆ ಪ್ರೌಢ ವಿಷಯಗಳನ್ನು ತಿಳಿದುಕೊಳ್ಳಲು ಪ್ರಯತ್ನಪಡಬೇಕು.

## ಪಾಶ್ಚಾತ್ಯ ತರ್ಕದ ಪ್ರಾದುರ್ಭಾವ

'ವಿಚಾರ'ದ ಬಗ್ಗೆ ವೈಜ್ಞಾನಿಕ ಅಧ್ಯಯನದ ಇತಿಹಾಸವನ್ನು ಕುರಿತು ಒಂದೆರಡು ಪ್ರಾಸ್ತಾವಿಕ ವಿಷಯಗಳನ್ನು ಇಲ್ಲಿ ಹೇಳಬೇಕಾಗಿದೆ.

ಮಾನವನು ಮಾನಸಿಕ ಕ್ರಿಯೆ ಎನಿಸುವ 'ಚಿಂತನೆ' ಅಥವಾ 'ಆಲೋಚನೆ'ಗಳನ್ನು ಆದಿಯಿಂದಲೂ ಮಾಡುತ್ತಿದ್ದರೂ, ಅದರ ವೈಜ್ಞಾನಿಕ ಅಧ್ಯಯನ (scientific study) ಮಾಡಲು ತೊಡಗಿದ್ದು ಇತ್ತೀಚೆಗೆ ಎಂದು ಹೇಳಬಹುದು. ಇದು ಎಲ್ಲ ಜ್ಞಾನ ಶಾಖೆಗಳಿಗೂ ಅನ್ವಯಿಸುತ್ತದೆ. ಪಾಶ್ಚಾತ್ಯ ಇತಿಹಾಸವನ್ನು ತೆಗೆದುಕೊಂಡರೆ ಈ ವಿಷಯದಲ್ಲಿ ವೈಜ್ಞಾನಿಕ ಅಧ್ಯಯನದ ಪ್ರಥಮ ಹೆಜ್ಜೆ ಗ್ರೀಕರಲ್ಲಿ ಕಂಡುಬರುತ್ತದೆ. ಅದರಲ್ಲೂ ಅರಿಸ್ಟಾಟಲನೆಂಬ ಮಹಾಮೇಧಾವಿ (ಕ್ರಿ. ಪೂ. 384—322) 'ವಿಚಾರ' ಅಥವಾ 'ತರ್ಕ'ದ ನಿಯಮಗಳನ್ನು ಮೊದಲ ಬಾರಿಗೆ ವ್ಯವಸ್ಥಿತ ರೀತಿಯಲ್ಲಿ ವಿವರಿಸುತ್ತಾನೆ. ಈತನಿಗಿಂತ ಹಿಂದೆ ಪ್ರಬಲರಾಗಿದ್ದ ಸೋಫಿಸ್ಟರೆನ್ನುವ ವಾಗ್ಮಿಗಳು ವಾದಕಲೆ (Art of arguing)ಯಲ್ಲಿ ಪ್ರಸಿದ್ಧರಾಗಿದ್ದರೂ ಅದನ್ನು ಕೇವಲ ವಾದಕ್ಕಾಗಿಯೇ ಬಳಸುತ್ತಿದ್ದರು. ವಾದಕಲಾಕೌಶಲರಾಗಿದ್ದು ವಾದದಲ್ಲಿ ಹೇಗೆ ಜಯಿಸಬಹುದೆಂಬುದೇ ಅವರ ಮುಖ್ಯ ಗುರಿಯಾಗಿತ್ತೇ ಹೊರತು, ಅವರ ವಾದವು ಶ್ರೇಯಸ್ಕರವಾದ ಗುರಿಯನ್ನು ಸಾಧಿಸುವ ಮಾರ್ಗವೇ, ಎನ್ನುವ ವಿವೇಚನೆ ಅವರಿಗೆ ಬೇಕಾಗಿರಲಿಲ್ಲ. ಭಾರತೀಯರು ಇಂತಹ ಕಲೆಯನ್ನು 'ವಿತಂಡವಾದ' ಎಂದು ಕರೆದಿದ್ದಾರೆ. ಗ್ರೀಕರಲ್ಲಿ ಪ್ರಥಮ ತಾತ್ವಿಕನಾದ ಮಹಾಮಹಿಮ ಸಾಕ್ರಟೀಸನು (ಕ್ರಿ. ಪೂ. 469—399) ವಾದದ ಗುರಿ ಕಪಟ ರೀತಿಯಲ್ಲಿ ಗೆಲ್ಲುವುದಲ್ಲ, ಎಲ್ಲ ವಾದವೂ 'ಸತ್ಯ'(Truth, Justice)ವನ್ನು ಪ್ರತಿಪಾದಿಸುವ ಸಾಧನ ಎಂದು ಹೇಳಿ, ವಾದವನ್ನು ಸತ್ಯದ ಪ್ರಕಟಣೆಗಾಗಿ ಬಳಸಬೇಕೆಂದು ತೋರಿಸಿಕೊಟ್ಟನು. ಸಾಕ್ರಟೀಸನ ಈ ಆದರ್ಶವನ್ನು ಆತನ ಶಿಷ್ಯನಾದ ಮತ್ತೊಬ್ಬ

ಗ್ರೀಕ್ ಮೇಧಾವಿ ಪ್ಲೇಟೋ (ಕ್ರಿ. ಪೂ. 427-348) ತನ್ನ ಗ್ರಂಥಗಳಲ್ಲಿ ವಿವರಿಸಿದ್ದಾನೆ. ಇವರ ಜಾಡನ್ನೇ ಹಿಡಿದು ಅರಿಸ್ಟಾಟಲನು ತರ್ಕ ಮತ್ತು ಸತ್ಯಗಳ ಸಂಬಂಧಗಳನ್ನು ತನ್ನ ವಿವೇಚನೆಗಳ ಮೂಲಕ ನಮಗಿತ್ತಿದ್ದಾನೆ. ಮೊದಲಬಾರಿಗೆ ವಾದ, ತರ್ಕ (Dialectics) ಸತ್ಯ ಇವುಗಳ ವಿಷಯದಲ್ಲಿ ಒಂದು ವ್ಯವಸ್ಥಿತ ರೀತಿಯ ವಿಚಾರ ಉಪಕ್ರಮ ಅರಿಸ್ಟಾಟಲನ ಗ್ರಂಥಗಳಲ್ಲಿ ಕಂಡುಬರುತ್ತದೆ. ಈ ಕಾರಣದಿಂದ ಆತನನ್ನು ಪಾಶ್ಚಾತ್ಯ ತರ್ಕಶಾಸ್ತ್ರದ ಪ್ರವರ್ತಕ ಎಂದು ಕರೆಯುತ್ತಾರೆ. ಈತನು ಹಾಕಿಕೊಟ್ಟ ವಿಚಾರಮಾರ್ಗವನ್ನು ಸಾಂಪ್ರದಾಯಿಕ ತರ್ಕ (Traditional Logic) ಎಂದು ಕರೆಯುತ್ತಾರೆ. ತರ್ಕಶಾಸ್ತ್ರ ಬೆಳೆಯುತ್ತಾ ಬಂದು ಆಧುನಿಕ ಕಾಲದಲ್ಲಿ ತರ್ಕದ ಸ್ವಭಾವ ಮತ್ತು ಕ್ಷೇತ್ರವೈಶಾಲ್ಯದ ಬಗ್ಗೆ ವಿಶೇಷ ಜಿಜ್ಞಾಸೆಯುಂಟಾಗಿ ಆಧುನಿಕ ತರ್ಕ (Modern Logic) ದಲ್ಲಿ ಪರ್ಯವಸಾನಗೊಂಡಿದೆ. ತರ್ಕಶಾಸ್ತ್ರದ ಬೆಳವಣಿಗೆಯಲ್ಲಿ ಉಂಟಾಗಿರುವ ಈ ಹಂತಗಳಲ್ಲಿರುವ ಮುಖ್ಯ ವ್ಯತ್ಯಾಸವೇನೆಂಬುದನ್ನು ಮುಂದಕ್ಕೆ ನೋಡುತ್ತೇವೆ.

ಪಾಶ್ಚಾತ್ಯರಲ್ಲಿ 'ವಿಚಾರ' 'ವಾದ'ಗಳ ಬಗ್ಗೆ ವೈಜ್ಞಾನಿಕ ಅಧ್ಯಯನ ನಡೆದ ಹಾಗೆಯೇ ಭಾರತದಲ್ಲೂ ನಡೆದಿತ್ತು. ಅದರ ಸೂಕ್ಷ್ಮ ವಿಚಾರವನ್ನು, ಭಾರತೀಯರಾಗಿ ನಾವು ಸೂಕ್ಷ್ಮವಾಗಿ ತಿಳಿದುಕೊಳ್ಳುವುದು ಸೂಕ್ತವಾಗಿದೆ.

## ಭಾರತೀಯ ತರ್ಕಶಾಸ್ತ್ರ

ಭಾರತೀಯ ವಿಚಾರ ಸಾಹಿತ್ಯದಲ್ಲಿ 'Logic' ಎನ್ನುವ ಪದಕ್ಕೆ ಸಮಾನವಾಗಿ ಹಲವು ಪದಗಳಿವೆ—ಆನ್ವೀಕ್ಷಕೀ, ನ್ಯಾಯ ವಿಸ್ತರ, ನ್ಯಾಯದರ್ಶನ, ತರ್ಕಶಾಸ್ತ್ರ, ಪ್ರಮಾಣಶಾಸ್ತ್ರ ಇತ್ಯಾದಿ. ಕ್ರಿ.ಪೂ.ಕ್ಕೆ ಮೊದಲೇ ಎಂದರೆ ವೇದಯುಗದ ಅಂತ್ಯ ಭಾಗದಲ್ಲಿ ಕ್ರಿ. ಪೂ ಆರನೆಯ ಶತಮಾನದ ಹೊತ್ತಿಗೆ 'ವಿಚಾರ,' 'ವಿವೇಚನೆ' (Reasoning, discrimination)ಯ ಮಹತ್ವವನ್ನು ಕಂಡುಕೊಂಡ ಭಾರತೀಯ ಋಷಿಗಳ ತತ್ವದಲ್ಲಿ 'ಮನನ'ದ (reflection) ಸ್ಥಾನವನ್ನು ಕಂಡುಕೊಂಡಿದ್ದರು. 'ಆನ್ವೀಕ್ಷಕೀ' ಎನ್ನುವುದು ಮೊದಲು ಮನನದ ವಿಸ್ತಾರ ಕ್ಷೇತ್ರವನ್ನು ಸೂಚಿಸುವಂತಿದ್ದು ತತ್ವಶಾಸ್ತ್ರಕ್ಕೆ ಪರ್ಯಾಯವಾಗಿತ್ತು. ಆತ್ಯಂತಿಕ ಸತ್ಯ (Ultimate Reality)ದ ಅನ್ವೇಷಣೆ ಮತ್ತು ಸಾಕ್ಷಾತ್ಕಾರದಲ್ಲಿ ಮನನ, ಚಿಂತನದ ಮಾರ್ಗ 'ಆನ್ವೀಕ್ಷಕೀ' ಸೂಚಿಸುತ್ತಿತ್ತು. ಅದರ ಅಂಗವಾಗಿಯೇ ಅನಂತರ ಬಂದ ನ್ಯಾಯ, ತರ್ಕ ಮತ್ತು ಪ್ರಮಾಣಶಾಸ್ತ್ರಗಳೆಂಬವು, ಸತ್ಯ ಶೋಧನೆಯಲ್ಲಿ ಸಲಕರಣೆಗಳಾದವು. ಎಂದರೆ ನ್ಯಾಯ ನ್ಯಾಯಕ್ಕಾಗಿ ಅಲ್ಲ, ತರ್ಕ ತರ್ಕಕ್ಕಾಗಿ ಅಲ್ಲ, ಅವು ಸತ್ಯದ ಅನ್ವೇಷಣೆಯಲ್ಲಿ ಉಪಯುಕ್ತವಾಗುವ ಮಾರ್ಗಗಳು, ವಿಜ್ಞಾನಗಳು, ಎನ್ನುವ ಅಭಿಪ್ರಾಯವಿತ್ತು. ದೋಷಪೂರಿತ ವಿಚಾರವು ತತ್ವದ ಅನ್ವೇಷಣೆಯಲ್ಲಿ ಸಹಾಯಮಾಡಲಾರದು ಎಂದು ಭಾರತೀಯರು ಮನಗಂಡು, ತರ್ಕ ಅಥವಾ

ವಿಚಾರವು ಹೇಗೆ 'ಪ್ರಮಾಣಶಾಸ್ತ್ರ'(Science of Valid Thinking)ವಾಗಿ ನಿರ್ದಿಷ್ಟ ಜ್ಞಾನವನ್ನು ಬೆಳೆಸಬಲ್ಲದು ಎಂದು, ಅದರ ರೂಪರೇಷೆಗಳನ್ನು 'ನ್ಯಾಯಸೂತ್ರ' ಮತ್ತು 'ವೈಶೇಷಿಕ ಸೂತ್ರ'ಗಳಲ್ಲಿ ವಿವರಿಸಿದ್ದಾರೆ. ಈ ಸೂತ್ರಗಳು ವಿಷಯದ ಬಗ್ಗೆ ಕ್ರೋಡೀಕೃತ ದೆಶೆಯನ್ನು ಸೂಚಿಸುತ್ತವೆ. ಆದರೆ ಅವುಗಳ ಕ್ರೋಡೀಕರಣಕ್ಕೆ ಮುನ್ನ ವೈದಿಕ ತತ್ವದ ಅಂಗವಾಗಿ ಅವೈದಿಕ ಧರ್ಮಗಳೆನಿಸಿದ ಜೈನ ಮತ್ತು ಬೌದ್ಧ ತರ್ಕಗಳನ್ನು ತ[illegible]ಯುವ ಉದ್ದೇಶದಿಂದ 'ಆನ್ವೀಕ್ಷಕೀ' ದೃಷ್ಟಿ ಬೆಳೆದಿತ್ತು. ಇದನ್ನು ಕ್ರಿ.ಪೂ. 4 ಮತ್ತು 3 ಶತಮಾನಗಳ ಮಧ್ಯಕ್ಕೆ ಸೇರಿಸಬಹುದು. ಈ ಆನ್ವೀಕ್ಷಕೀ ಎನ್ನುವ ತಾತ್ವಿಕ ದೃಷ್ಟಿಯ ವಿಚಾರ-ವಿಜ್ಞಾನದಲ್ಲಿ 'ಪ್ರಮಾ' (Truth) ಎನ್ನುವುದು ಕೇವಲ ಪರತತ್ವಕ್ಕೆ ಮಾತ್ರ ಸಂಬಂಧಪಟ್ಟದ್ದೆಂದು ಭಾವಿಸದೆ, ವ್ಯಾವಹಾರಿಕವಾಗಿಯೂ ವಿಚಾರದ ನಿರ್ದುಷ್ಟತೆ (valid thinking) ಆವಶ್ಯಕವಾದದ್ದರಿಂದ 'ಪ್ರಮಾ' ಎನ್ನುವುದು ವಿಚಾರದಲ್ಲೂ ಇರಬೇಕೆಂದು ಮನಗಂಡಿದ್ದರು. ಎಂದರೆ ವಿಚಾರವೂಕೂಡ ಪ್ರಾಮಾಣಿಕವಾಗಿರಬೇಕೆಂದು ಭಾವಿಸಿದ್ದರು. ಎಂದರೆ, ಆಧುನಿಕ ತರ್ಕಶಾಸ್ತ್ರಜ್ಞರು ಹೇಳುವಂತಹ ಭೌತವಿಜ್ಞಾನ ಪ್ರಮಾಣವೂ ತರ್ಕದಲ್ಲಿ ಅಗತ್ಯ ಎನ್ನುವಂತಹ ಅಭಿಪ್ರಾಯ ಭಾರತೀಯರಲ್ಲಿ ಕ್ರಿ. ಪೂ. ದಲ್ಲಿಯೇ ಹುಟ್ಟಿದ್ದರ ಕಾರಣವಾಗಿ, 'ಪ್ರಮಾ' ಎನ್ನುವುದು ಕ್ಷೇತ್ರ ವ್ಯಾವಹಾರಿಕ ನಿದರ್ಶನ, ದೃಷ್ಟಾಂತ (empirical evidences)ಗಳನ್ನೂ ಒ[illegible]ಗೊಳ್ಳುವಂತೆ ಮಾಡಿತ್ತು. ನ್ಯಾಯ ಮತ್ತು ವೈಶೇಷಿಕ ದರ್ಶನಗಳಲ್ಲಿ ಮೊದಮೊದಲು ಸ್ವತಂತ್ರವಾಗಿ ಬೆಳೆದ ಪ್ರಮಾಣ-ಪ್ರಮೇಯಗಳ ಜಿಜ್ಞಾಸೆ, ಸಮನ್ವಯ ಹೊಂ[illegible] ನ್ಯಾಯ-ವೈಶೇಷಿಕಗಳು ಪರಸ್ಪರ ಪೂರಕ ದರ್ಶನಗಳೆಂದಾದವು. ಇದರ ಅಂತರಾರ್ಥ[illegible]ವೇನೆಂದರೆ-ತರ್ಕವು ಕೇವಲ ವಿಚಾರದ ಆಕಾರಕ್ಕೆ (formal) ಸಂಬಂಧಪಟ್ಟದ್ದಲ್ಲ ವಸ್ತುವಿಗೂ ಸಂಬಂಧಪಟ್ಟಿದ್ದು (material); ಅನುಮಾನವು (inference) ಕೇವಲ ನಿಗಮನ (deductive) ಅಲ್ಲ, ವಿಗಮನವೂ (inductive) ಕೂಡ ಎಂದು, ಪಾಶ್ಚಾತ್ಯ[illegible]ರಲ್ಲಿ ಆಧುನಿಕ ಕಾಲದಲ್ಲಿ ತರ್ಕದ ಕ್ಷೇತ್ರವನ್ನು ವಿಸ್ತಾರಗೊಳಿಸಿದ್ದಾಗಿದ್ದರೆ, ಇಂತ[illegible]ದನ್ನು ಭಾರತೀಯರು ಕ್ರಿ. ಪೂ. ದಲ್ಲಿಯೇ ಮಾಡಿ ತೋರಿಸಿದ್ದರು. ನ್ಯಾಯವು ನೀಡು[illegible] 'ಅವಯವ ತರ್ಕ' (Syllogism)ದಲ್ಲಿ ಇವೆರಡೂ ಹೇಗೆ ಕೂಡಿವೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಪರತತ್ವದ ಶೋಧನೆಯಲ್ಲಿ ಆತ್ಯಂತಿಕವಾಗಿ ತರ್ಕಕ್ಕೆ ಅತೀತವಾ[illegible] 'ಅಪರೋಕ್ಷ ಜ್ಞಾನವೇ' ಮುಖ್ಯ ಎಂದು ಭಾರತೀಯರು ಭಾವಿಸಿದ್ದರೂ, ವಿಚಾರ-ಶುದ್ಧ[illegible] ಜಿಜ್ಞಾಸೆಯಲ್ಲಿ ತರ್ಕಕ್ಕೆ ಪ್ರಾತಿನಿಧ್ಯ ನೀಡಿದ್ದರು. ಸುವ್ಯವಸ್ಥಿತ ರೀತಿಯ ವಿಚಾರ ಪ್ರ[illegible]ಪಾದನೆಯಲ್ಲಿ—ವ್ಯಾವಹಾರಿಕ ದೃಷ್ಟಿಯಿಂದಲೂ—ತರ್ಕಕ್ಕೆ ಗೌರವಾನ್ವಿತ ಸ್ಥಾನ ಭಾರ[illegible]ತೀಯ ವಿಚಾರವಾಙ್ಮಯದಲ್ಲಿ ಸದಾ ಕಾಣುತ್ತದೆ. ಇದಕ್ಕೆ ಸಾಕ್ಷಿಯಂತೆ 'ನವೀನ ನ್ಯಾಯ' ಬೆಳೆದಿದೆ.

ಈ ಗ್ರಂಥದ ಉದ್ದೇಶ ಕೇವಲ ಪಾಶ್ಚಾತ್ಯ ತರ್ಕ ವಿಧಾನವನ್ನು ಪರಿಚಯ ಮಾಡಿಕೊಡುವಂತಹದು. ಆದ್ದರಿಂದ ಅದರ ಕಡೆ ಈಗ ಗಮನ ನೀಡೋಣ. ಅದಕ್ಕೆ ಮುನ್ನ ಈಗಲೇ ಸೂಚಿಸಿರುವ ಪಾಶ್ಚಾತ್ಯರಲ್ಲಿ ತರ್ಕದ ಬಗ್ಗೆ ದೃಷ್ಟಿ ಬೆಳೆದು "ಸಾಂಪ್ರದಾಯಿಕ ತರ್ಕ" "ಆಧುನಿಕ"ವಾಗಿ ಹೇಗೆ ಪರಿಣಾಮ ಹೊಂದಿತು ಮತ್ತು ಅಧ್ಯಯನದ ಕ್ಷೇತ್ರ ಹೇಗೆ ವಿಶಾಲವಾಯಿತು ಎನ್ನುವುದನ್ನು ಸೂಕ್ಷ್ಮವಾಗಿ ಅರಿಯಬೇಕಾಗಿದೆ.

## ಪಾಶ್ಚಾತ್ಯ "ಸಾಂಪ್ರದಾಯಿಕ ತರ್ಕದ" ಇತಿ ಮಿತಿಗಳು

'ಸಾಂಪ್ರದಾಯಿಕ ತರ್ಕ' ಎಂದರೆ ಸಾಮಾನ್ಯವಾಗಿ ಅರಿಸ್ಟಾಟಲನ ಕ್ರಮವನ್ನು ಅನುಸರಿಸಿದ ತರ್ಕ ಎಂದರ್ಥ. ಆತನು ಪಾಶ್ಚಾತ್ಯರಲ್ಲಿ ತರ್ಕವನ್ನು ಕುರಿತು ವ್ಯವಸ್ಥಿತ ರೀತಿಯಲ್ಲಿ ವಿಚಾರಮಾಡಬೇಕು ಎಂದು ಹೇಳಿ ಹಲವು ನಿಯಮಗಳನ್ನು ಜಾರಿಗೆ ತಂದವರಲ್ಲಿ ಮೊದಲಿಗ. ಆದ್ದರಿಂದ ಆತನನ್ನು ತರ್ಕಶಾಸ್ತ್ರಪ್ರವರ್ತಕ ಎನ್ನುತ್ತಾರೆ. ಈತನು ಆಲೋಚನೆ ಅಥವಾ ವಿಚಾರ ಯಾವ ನಿಶ್ಚಿತ ರೂಪ (ಆಕಾರ)ವನ್ನು ಅನುಸರಿಸಿದರೆ ಅರ್ಥ ಸ್ಪಷ್ಟವಾಗುತ್ತದೆ ಎಂದು ಹೇಳುತ್ತಾನೆ. ಎಲ್ಲ ಸಾಮಾನ್ಯ ವಾಕ್ಯಗಳನ್ನೂ ಒಂದು ನಿಶ್ಚಿತ ರೂಪದ 'ತಾರ್ಕಿಕವಾಕ್ಯ'ಗಳಲ್ಲಿ ವ್ಯಕ್ತ ಮಾಡಬೇಕಾಗುತ್ತದೆ. ಎಲ್ಲ 'ಅನುಮಾನ' (inference) ಗತಿಗಳೂ ನಿಶ್ಚಿತ ರೂಪವನ್ನು ತಾಳಿದರೆ ವ್ಯಕ್ತಮಾಡಬಹುದಾದ ಭಾವ ಸ್ಫುಟಗೊಳ್ಳುತ್ತದೆ ಎಂದು, ಹೆಚ್ಚಿನ ಪ್ರಾತಿನಿಧ್ಯವನ್ನು 'ಆಕಾರ'ಕ್ಕೆ, 'ರೂಪಕ್ಕೆ' (form) ಕೊಡುತ್ತಾನೆ. ವಿಚಾರಕ್ಕೆ ಒಂದು ಆಕಾರವಿದೆ, ಆ ಆಕಾರವನ್ನು ಪ್ರಥಮವಾಗಿ ಗಮನಿಸಬೇಕಲ್ಲದೆ, ವಿಚಾರ್ಯವಾದ ವಸ್ತುವನ್ನಲ್ಲ. ವಸ್ತು (matter) ಏನೇ ಇರಬಹುದು ; ಅದು ಮುಖ್ಯವಲ್ಲ ಎಂದು, ನಮ್ಮ ಚಿಂತನೆ ಅಥವಾ ಮನೋಭಾವಗಳನ್ನು ವ್ಯಕ್ತಮಾಡುವಾಗ ಯಾವ ನಿಯಮಗಳನ್ನು ಪಾಲಿಸಬೇಕು ಎಂದು ನಿರ್ಧರಿಸುತ್ತಾನೆ. ಆತನ ಪ್ರಕಾರ ಅತಿ ಆದರ್ಶವಾದ 'ಆಕಾರ'ವೆಂದರೆ ನಿಗಮನ ಅನುಮಾನದ ಮೂರು ಅವಯವದ ತರ್ಕಸರಣಿ. ಇದನ್ನು 'Syllogism' ಎನ್ನುತ್ತಾರೆ. ಈ ಪದ್ಧತಿ ಅಥವಾ ಕ್ರಮವನ್ನು ಅನುಸರಿಸಿದರೆ ತರ್ಕವು ಶುದ್ಧವಾಗಿರುತ್ತದೆ, ನಿರ್ಣಯಾತ್ಮಕವಾಗಿರುತ್ತದೆ. ಇದನ್ನು 'Logic of proof' ಅಥವಾ 'Logic of demonstration' ಎನ್ನುತ್ತಾರೆ. 'ವಿಚಾರ್ಯ-ವಸ್ತು ಮುಖ್ಯವಲ್ಲ' ಎನ್ನುವಾಗ, ಅದು ತೀರ ಕಲ್ಪನೆಯಾಗಿರಬೇಕು ಎಂದು ಆತ ಹೇಳಲಿಲ್ಲ. ಪ್ರಪಂಚದ ಅನುಭವದಲ್ಲಿ ಸಿಗುವ ಭೌತ ವಸ್ತುವಾದರೂ, ಅದನ್ನು ವಿಚಾರದಲ್ಲಿ ವ್ಯಕ್ತಪಡಿಸುವಾಗ ಶುದ್ಧ ವಿಚಾರ-ಮಾರ್ಗ ಮುಖ್ಯ ಎಂದು ಹೇಳುವ ಸಂಪ್ರದಾಯಕ್ಕೆ Formal Logical tradition ಎನ್ನುತ್ತಾರೆ. ಅರಿಸ್ಟಾಟಲನಿಗೆ ವಿಗಮನ (inductive)ತರ್ಕ ಗೊತ್ತಿಲ್ಲವೆಂದಲ್ಲ. ಆದರೆ ಆತನ ಪ್ರಕಾರ ನಿಗಮನ ತರ್ಕದ ನಿರ್ಣಯವೂ ವಿಗಮನ ತಾರ್ಕಿಕ ರೂಪ (deductive

form)ಕ್ಕೆ ಪರಿವರ್ತಿಸಿ ಪರೀಕ್ಷಿಸಬೆ ಇತ್ಯರ್ಥವಾಗುವಂತಹುದಲ್ಲ. ಮುಖ್ಯವಾಗಿ ಅತ ಮೂರು ಅವಯವದ Syllogism ಆದರ್ಶ ರೂಪದ ತರ್ಕ ವಿಧಾನ ಎನ್ನುತ್ತಾನೆ.

ಆಧುನಿಕರು ಅರಿಸ್ಟಾಟಲನ Logic of proof or demonstration ಕೇವ ವಿಚಾರ ಸಾಂಗತ್ಯ (consistency)ವನ್ನು ಮಾತ್ರ ಗಮನಿಸುವುದೆಂದೂ ಅದು ಶೋ ನಕ್ಕೆ ಸಾಧನ (means of discovery)ವು ಆಗಿರಬೇಕೆಂದು ಹೇಳುತ್ತಾರೆ. ಆಧು ಯುಗದಲ್ಲಿ ಪ್ರವರ್ತಿತವಾದ ಭೌತಿಕ ವಿಜ್ಞಾನ (Positive Science)ಗಳ ಸಮ ಶೋಧನ (discovery) ಇದಕ್ಕೆ ಸಹಾಯಮಾಡುವಂತಹ ತರ್ಕ ವಿಧಾನ ಬೇಕು. ಎ ವನ್ನೂ ಪೂರ್ವ ಗೃಹೀತವಾಗಿ ತೆಗೆದುಕೊಳ್ಳುವ ಅರಿಸ್ಟಾಟಲನ ತರ್ಕ ಸಂಶೋಧನೆಯ ಹೆಚ್ಚು ಸಹಾಯಮಾಡುವುದಿಲ್ಲ. ಎಲ್ಲ ಗೃಹೀತ ಆಧಾರಗಳೂ ವ್ಯಾವಹಾರಿಕವಾಗಿ ವೀಕ್ಷ ದಿಂದಲೂ, (observation) ಪ್ರಯೋಗದಿಂದಲೂ (experiment) ಉತ್ಪನ್ನವಾಗಿ ಬೇಕು. ಹೀಗಿದ್ದ ಪಕ್ಷದಲ್ಲಿ ನಮ್ಮ ಅನುಮಿತಿ (conclusion) ಅಥವಾ ಸಿದ್ಧಾಂತಗಳ 'ಸತ್ಯ'ವಾಗಿರುತ್ತವೆ, ಇಲ್ಲದಿದ್ದರೆ ಕೇವಲ ಕಲ್ಪನೆ ಅಥವಾ ಉಪಕಲ್ಪನೆ (hypothetical ಆಗಿರುತ್ತವೆ ಎನ್ನುವುದು ಆಧುನಿಕರ ದೃಷ್ಟಿ. ಜ್ಞಾನ ವಿಸ್ತರಣೆಗೆ ಶೋಧನ ಮಾರ್ಗವಾ ಈ ವೀಕ್ಷಣಾ ಮತ್ತು ಪರೀಕ್ಷಣಾ ಅಥವಾ ಪ್ರಾಯೋಗಿಕ ಕ್ರಮಗಳು ಎಲ್ಲವನ್ನೂ ಕಾರ್ಯ-ಕಾರಣ ಸಂಬಂಧದಲ್ಲಿ ಅಭಿವ್ಯಕ್ತವಾಗುವುದರಿಂದ ವಿಚಾರ ಸ್ಪಷ್ಟವಾಗುವ ದೊಂದೇ ಅಲ್ಲದೆ, ವಸ್ತುಸಂವಾದಿ( materially consistent)ಯೂ ಆಗಿರುತ್ತದೆ, ಎನ್ನು ವುದು ಇಂದಿನ ದೃಷ್ಟಿ. ಸಾಂಪ್ರದಾಯಿಕ ತರ್ಕವಿಧಾನ ರೂಪ ಅಥವಾ ನಿಯಮಸಂವಾದಿ (formally consistent) ಆಗಿದ್ದರೆ, ಆಧುನಿಕ ತರ್ಕವು ವಸ್ತುಸಂವಾದಿಯೂ ಆಗಿರು ತ್ತದೆ. ಈ ವಿಚಾರಕ್ರಮವನ್ನು ಬೆಳಸಿದವರಲ್ಲಿ ಪ್ರಮುಖರು ಫ್ರಾನ್ಸಿಸ್ ಬೇಕನ್ (ಕ್ರಿ.ಶ. 1561-1626) ಮತ್ತು ಜಾನ್‌ಸ್ಟೂವರ್ಟ್‌ಮಿಲ್ (ಕ್ರಿ.ಶ. 1806-1873) ಎನ್ನುವವರು. ಇವರ ವಿಚಾರ ಧೋರಣೆಯನ್ನು ಅನುಸರಿಸಿದರೆ ತರ್ಕಶಾಸ್ತ್ರದ ಕ್ಷೇತ್ರ ವಿಶಾಲಗೊಂಡು ಭೌತವಿಜ್ಞಾನದ ವಿಚಾರ-ವಿಧಾನಗಳನ್ನೂ ಒಳಗೊಳ್ಳುತ್ತದೆ. ತರ್ಕವು ಕೇವಲ ತಾತ್ವಿಕರ ಜಿಜ್ಞಾಸೆಗೆ ಒಳಗೊಂಡಿರದೆ ಜ್ಞಾನ-ವಿಸ್ತರಣೆ ಎಲ್ಲ ವಿಭಾಗಗಳಿಗೂ ಸಂಬಂಧಪಟ್ಟಿದ್ದೆಂದು ತಿಳಿಯುತ್ತದೆ.

ಹೀಗೆ ತರ್ಕದ ಇತಿಹಾಸದಲ್ಲಿ ಆದ ಮಾರ್ಪಾಟು ಮತ್ತೂ ವಿವಿಧರೂಪಗಳನ್ನು ತಾಳಿ — ಗಣಿತೀಯತರ್ಕ (Mathematical Logic) ಅಥವಾ ಸಾಂಕೇತಿಕತರ್ಕ (Symbolic Logic), ವಿಕಾಸಾತ್ಮಕತರ್ಕ (Evolutionary Logic,) ಪ್ರಯೋಜನ ಪ್ರಮಾಣತರ್ಕ (Pragmatic Logic), ತಾರ್ಕಿಕ ವಿಶ್ಲೇಷಣೆ (Logical Analysis) —ಇಂದು ನಮ್ಮ ಗಮನವನ್ನು ಸೆಳೆಯುತ್ತವೆ. ಇದನ್ನು ಈ ಪರಿಚಯ ಗ್ರಂಥದಲ್ಲಿ ವಿಚಾ ಮಾಡುವ ಉದ್ದೇಶ ನಮಗಿಲ್ಲ.

## ಅಧ್ಯಾಯ 2

# ತರ್ಕಶಾಸ್ತ್ರದ ನಿರೂಪಣೆ, ಕ್ಷೇತ್ರವೈಶಾಲ್ಯ ಮತ್ತು ಪ್ರಯೋಜನ

### ಹಲವು ನಿರೂಪಣೆಗಳು

ಸಾಮಾನ್ಯವಾಗಿ ಹೇಳುವುದಾದರೆ ತರ್ಕಶಾಸ್ತ್ರವು ವ್ಯವಸ್ಥಿತ ರೀತಿಯಲ್ಲಿ 'ಚಿಂತನೆ' 'ವಿಚಾರ' ಮಾಡುವುದು ಹೇಗೆ ಎನ್ನುವ ಅಧ್ಯಯನ. ಇದು ಶಾಸ್ತ್ರದ ಸಾಮಾನ್ಯ ವಿವರಣೆ ಮಾತ್ರ. ಪ್ರಾರಂಭದಲ್ಲಿಯೇ ಈ ಶಾಸ್ತ್ರದ ಸಮಸ್ತ ಲಕ್ಷಣವನ್ನೂ, ಅಥವಾ ಅದರ ವೈಶಿಷ್ಟ್ಯವನ್ನು ಸೂಚಿಸುವಂತೆ ಒಂದೇ ವಾಕ್ಯದಲ್ಲಿ ಅಥವಾ ಸೂತ್ರದಲ್ಲಿ ನಿರೂಪಣೆ ಮಾಡುವುದು ಆತುರದ ಕೆಲಸವಾಗುತ್ತದೆ. ಈ ಶಾಸ್ತ್ರದ ಕ್ಷೇತ್ರ ಪರಿಚಯ ಮಾಡಿ ಕೊಂಡು, ಇತರ ಶಾಸ್ತ್ರಗಳಿಗೂ ಇದಕ್ಕೂ ಇರುವ ಸಂಬಂಧ ವ್ಯತ್ಯಾಸಗಳನ್ನು ತಿಳಿಯದ ಹೊರತು ಯಾವ ನಿರೂಪಣೆಯ ಅಂತರಾರ್ಥವೂ ನಮಗೆ ತಿಳಿಯುವುದಿಲ್ಲ. ಆದರೂ ಕೂಡ ಕೇವಲ ಉಪಕಲ್ಪನೆಯ ರೀತಿಯಲ್ಲಿ ಹಲವಾರು ತರ್ಕಶಾಸ್ತ್ರಜ್ಞರು ನೀಡಿರುವ ನಿರೂಪಣೆಗಳನ್ನು ಈಗ ಸ್ಮರಿಸಿಕೊಳ್ಳಬಹುದು.

1. "ತರ್ಕವು ಒಂದು ವಿಚಾರಕಲೆ (art of thinking) ಮತ್ತು ವಿಚಾರ ವಿಜ್ಞಾನ (science of reasoning)"—*Whateley.*

2. "ತರ್ಕವು ಒಂದು ವಿಚಾರ-ಕಲೆ (art of thinking)"—*Arnauld.*

3. "ತರ್ಕವು ಸತ್ಯಶೋಧನೆಯಲ್ಲಿ ನಿರತವಾಗಿರುವ ಮಾನವನ ಮನಸ್ಸಿನ ಕ್ರಮವನ್ನು ಅಧ್ಯಯನ ಮಾಡುವ ಒಂದು ವಿಜ್ಞಾನ"[1]—*Port Royal Logic.*

4. "ತರ್ಕವು ದೃಷ್ಟಾಂತ ಅಥವಾ ಪ್ರಮಾಣ ನಿರ್ಧಾರಕ್ಕೆ ಪುಷ್ಟಿಕೊಡುವಂತಹ ಬುದ್ಧಿ ಪ್ರವೃತ್ತಿಗಳನ್ನು ಅಧ್ಯಯನ ಮಾಡುವ ಶಾಸ್ತ್ರ"[2]—*J. S. Mill.*

---

1. "Logic is the Science of the operations of human understanding in the pursuit of truth"—*Port Royal Logic.*

2. "Logic is the Science of the operations of the understanding which are subservient to the estimation of evidence."
—*J. S. Mill.*

5. "ತರ್ಕವು ವಾದಮಾಡುವುದನ್ನು ಕಲಿಸುವ ಒಂದು ವಿಜ್ಞಾನ"[1]

—*Albertus Magn*

6. "ತರ್ಕವು 'ವಿಚಾರ'ವೆನ್ನುವುದರ ವಿಸ್ತಾರವಾದ ಮತ್ತು ಯಾ ಸಂಶಯಕ್ಕೂ ಎಡೆಕೊಡದ ವಿಶ್ಲೇಷಣೆ ಮತ್ತು ವಿಮರ್ಶೆ"—*W. E Johnson.*[2]

ಈ ನಿರೂಪಣೆಗಳ ವಿಶ್ಲೇಷಣೆಯಲ್ಲಿ ತೊಡಗುವುದು ಈ ಅಧ್ಯಯನವನ್ನು ಪ್ರಾರ ಸುತ್ತಿರುವ ವಿದ್ಯಾರ್ಥಿಯ ದೃಷ್ಟಿಯಿಂದ ಉಪಯುಕ್ತವಾಗುವುದಿಲ್ಲ. ಶಾಸ್ತ್ರಾಧ್ಯಯನ ಅಂತ್ಯದಲ್ಲಿ ಅದನ್ನು ಆತನೇ ಮಾಡಿ ಅವುಗಳ ನಿಷ್ಕರ್ಷೆಮಾಡಬಹುದು. ಮುಖ್ಯವಾ **ತರ್ಕವು 'ವಿಚಾರ'ಕ್ಕೆ ಸಂಬಂಧಪಟ್ಟ ವೈಜ್ಞಾನಿಕ ಅಧ್ಯಯನ.** ಅದನ ಬಳಸುವ ರೀತಿಯಲ್ಲಿ ಯಾವ ನಿಯಮಗಳನ್ನು ಪಾಲಿಸಿದರೆ ಅಭಿವ್ಯಕ್ತಿಯಲ್ಲಿ ಕುಶಲ ಯನ್ನು ಹೊಂದಬಹುದು ಎಂದು ಹೇಳುವ ಶಾಸ್ತ್ರ. ತಾತ್ವಿಕ ದೃಷ್ಟಿಯಿಂದ ಇ ಮಾನಸಿಕ ಕ್ರಿಯೆಗಳಾದ ಬುದ್ಧಿ ಮತ್ತು ಅದರ ವೃತ್ತಿಗಳನ್ನು ವಿವೇಚಿಸುವ ಹಾಗೆಯೆ ಪ್ರಾಯೋಗಿಕ ದೃಷ್ಟಿಯಿಂದಲೂ ಇದು ಸಫಲತೆಯನ್ನು ನೀಡುವಂತಹ ವಿಚಾರಶಾಸ್ತ್ರ ಎಂದು ಮನಗಂಡರೆ ಈಗ ಸಾಕು.

ಇಲ್ಲಿ ಮತ್ತೊಂದು ವಿಷಯವನ್ನು ಗಮನಿಸಬೇಕು. ಪಾಶ್ಚಾತ್ಯರಲ್ಲಿ ತರ್ಕಶಾಸ್ತ್ರ ಪ್ರವರ್ತಕ ಅರಿಸ್ಟಾಟಲ್ ಎಂದು ಈ ಹಿಂದೆ ಹೇಳಿದ್ದೇವೆ. ಆದರೆ ಇಲ್ಲಿ ಅದರ ನಿರೂಪ (definition) ಪ್ರಸಂಗ ಬಂದಿರುವಾಗ, ನಾವು ಗಮನಿಸಬೇಕಾದ್ದೇನೆಂದರೆ 'Logic ಎನ್ನುವ ಪದದ ಹೆಸರಿನಿಂದಲೇ ಅದನ್ನು ಒಂದು ಪ್ರತ್ಯೇಕ ಶಾಸ್ತ್ರವೆಂದು ಅರಿಸ್ಟಾಟಲನ ಕರೆಯಲಿಲ್ಲ. ಇದು ಸೋಜಿಗವೇ. ಆ ಪದವೇ ಆತನ ಗ್ರಂಥದಲ್ಲಿ ಇಲ್ಲದಿರುವುದಕ ಕಾರಣ, ಆ ಶಾಸ್ತ್ರ ಯಾವ ವಸ್ತುವನ್ನು ಅಧ್ಯಯನ ಮಾಡುತ್ತದೋ ಅದರ ಸೀಮ ಯನ್ನು ನಿರ್ಧರಿಸುವುದು ಕಷ್ಟವೆಂದು ಆತನು ಅರಿತಿದ್ದುದು. ಆತನು ಅದರ 'ನಿರೂಪಣೆ' ಹೋಗಲಿಲ್ಲ. ಆದರೆ ತರ್ಕಬದ್ಧ ವಾದಗಳ, ಅವುಗಳ ಸಮಸ್ಯೆಗಳ, ಅವುಗಳ ನಿದರ್ಶನಗ ಬಗ್ಗೆ ಬಹಳ ಬರೆದಿದ್ದಾನೆ. 'Logic' ಎನ್ನುವ ಪದದ ಉಪಯೋಗ ಆತನ ಶಿಷ್ಯರ ಬರ ಗಳಲ್ಲಿ ಪ್ರಥಮವಾಗಿ ಕಂಡುಬಂದು, ಈಗಲೂ ಪ್ರಾಪ್ತವಾಗಿರುವ ಹಲವು ಕ್ರಿ. ಪೂ ಮೂರನೆಯ ಶತಮಾನದ ಗ್ರಂಥಗಳಲ್ಲಿ ಸಿಗುತ್ತದೆ. 'Logic' ಎನ್ನುವ ಪದಕ್ಕೆ ಬಹ ಸಮೀಪದ ಪದ, ಪ್ಲೇಟೋ ಮತ್ತು ಅರಿಸ್ಟಾಟಲನ ಗ್ರಂಥಗಳಲ್ಲಿ ಕಂಡುಬರುವುದೆಂದ

---

1. "Logic is the science of argumentation".

2. "Logic is most comprehensively and least controver sially...the analysis and criticism of thought."—*W. E. Johnson.*

'Dialectic' ಎನ್ನುವಂತಹುದು. ಪ್ಲೇಟೋ ಈ ಪದವನ್ನು ಬಹು ವಿಸ್ತಾರ ಅರ್ಥದಲ್ಲಿ ತತ್ತ್ವಶಾಸ್ತ್ರ (metaphysics) ವನ್ನು ಒಳಗೊಂಡಂತೆ ಉಪಯೋಗಿಸುತ್ತಾನೆ. ಆತನ ದೃಷ್ಟಿಯಲ್ಲಿ Dialectic ಎಂದರೆ 'ವಸ್ತುಗಳ ಆಂತರಿಕ ಸ್ವಭಾವವೇನೆಂದು ಮನಸ್ಸು ತನ್ನಲ್ಲಿಯೇ ವಿಚಾರ ಮಾಡುವಂತಹುದು.'

ಏನೇ ಆಗಲಿ, 'Logic' ಎನ್ನುವ ಪದದ ವ್ಯುತ್ಪತ್ತಿಯನ್ನು ಗಮನಿಸಿ ಅದು ಯಾವುದನ್ನು ಕುರಿತು ಅಧ್ಯಯನ ಮಾಡುತ್ತದೆ, ಅದರ ಸ್ವಭಾವವೇನು ಎಂದು ತಿಳಿಯಲು ಪ್ರಯತ್ನ ಪಡಬಹುದು.

'Logos' ಎನ್ನುವ ಗ್ರೀಕ್ ಭಾಷೆಯಲ್ಲಿನ ಪದದಿಂದ ಅದರ ವಿಶೇಷಣವಾಗಿ 'Logic' ಎನ್ನುವ ಪದ ಬಂದಿದೆ. ಈ ಪದಕ್ಕೆ 'ಆಲೋಚನೆ', 'ವಿಚಾರ' ಎನ್ನುವ ಅರ್ಥವೂ ಇದೆ. 'ವೈಜ್ಞಾನಿಕ ರೀತಿಯ ಅಧ್ಯಯನ' ಎಂದೂ ಅರ್ಥವಿದೆ. ಇವೆರಡನ್ನೂ ಕೂಡಿಸಿಕೊಂಡರೆ 'Logic' ಎನ್ನುವಂತಹುದು 'ಆಲೋಚನೆಗೆ ಅಥವಾ ಬುದ್ಧಿಕ್ರಿಯೆಯಾದ ವಿಚಾರಕ್ಕೆ ಸಂಬಂಧಪಟ್ಟ ವ್ಯವಸ್ಥಿತ, ವೈಜ್ಞಾನಿಕ ಅಧ್ಯಯನ' ಎಂದಾಗುತ್ತದೆ. ಈ ಸಮನ್ವಯ ಅರ್ಥದಲ್ಲಿ ನಾವು Logic ಎನ್ನುವುದಕ್ಕೆ ಸಮನಾಗಿ 'ತರ್ಕಶಾಸ್ತ್ರ' ಎನ್ನಬಹುದು. ಮತ್ತೊಂದು ರೀತಿಯಲ್ಲಿ ಹೇಳಬಹುದಾದರೆ ತರ್ಕಶಾಸ್ತ್ರವೆನ್ನುವುದು 'ವಿಚಾರದ ವ್ಯವಸ್ಥಿತ ವಿಜ್ಞಾನ' ಎನ್ನಬಹುದು. ವಿಜ್ಞಾನದ ಲಕ್ಷಣಗಳೆಂದರೆ, ಅದು ಆರಿಸಿಕೊಂಡಿರುವ ವಸ್ತುವಾದ ಚಿಂತನೆ ಅಥವಾ ವಿಚಾರಕ್ರಿಯೆಯನ್ನು ವಿಶ್ಲೇಷಿಸಿ, ವಿಮರ್ಶೆಮಾಡಿ, ಅದು ವ್ಯವಸ್ಥಿತವಾಗಬೇಕಾದರೆ ಯಾವ ನಿಯಮಗಳನ್ನು ಪಾಲಿಸಬೇಕು, ಅದಕ್ಕೆ ಧ್ಯೇಯ ಎನ್ನುವುದೇನಾದರೂ ಇದೆಯೇ ಎನ್ನುವ ಸಮಸ್ತ ಅಂಶಗಳನ್ನು ಗಮನಿಸುವ ಅಧ್ಯಯನ. ತರ್ಕಶಾಸ್ತ್ರಕ್ಕೆ ಒಂದು ನಿರೂಪಣೆಯನ್ನು ನೀಡುವುದಾದರೂ ಈ ಎಲ್ಲ ಅಂಶಗಳೂ ಅದರಲ್ಲಿ ಸೂಚಿತವಾಗಿದೆಯೇ ಎಂದು ನಾವು ನೋಡಬೇಕಾಗುತ್ತದೆ.

ಈ ದೃಷ್ಟಿಯಿಂದ ನೋಡಿದರೆ ತರ್ಕಶಾಸ್ತ್ರವು 'ವಿಚಾರ'ಕ್ಕೆ ಸಂಬಂಧಿಸಿದ ಒಂದು ವಿಜ್ಞಾನ. ವಿಚಾರದ ನಿರ್ದುಷ್ಟ ರೂಪಗಳನ್ನು ವಿವೇಚಿಸುವುದೊಂದೇ ಅಲ್ಲದೆ ಅದರ ಗುರಿಯಾದ 'ಸತ್ಯ' ಎನ್ನುವುದೇನೆಂಬುದನ್ನೂ ಗುರುತಿಸುತ್ತದೆ. ಮತ್ತು ವಿಚಾರ-ವಿಧಾನವೆಲ್ಲಾ ಆ ಗುರಿಯನ್ನು ಸೇರುವಂತೆ ಸಹಾಯಮಾಡುತ್ತದೆ. ಈ ಸತ್ಯವೆನ್ನುವುದರ ಸ್ವರೂಪವೇನು, ಅದರಲ್ಲಿ ಸ್ಪಷ್ಟವಾಗಿ ನಾವು ವಿಭಜಿಸಬಲ್ಲ ಅಂಶಗಳಿವೆಯೇ, ಅವುಗಳನ್ನು ತರ್ಕಶಾಸ್ತ್ರ ಹೇಗೆ ಸಾಧಿಸುತ್ತದೆ ಎನ್ನುವುದನ್ನು ಮುಂದೆ ನೋಡುತ್ತೇವೆ.

## ಲಘು ಅಥವಾ ಸಾಮಾನ್ಯ ಆಲೋಚನೆ ಮತ್ತು 'ವ್ಯವಸ್ಥಿತ ವಿಚಾರ'

ತರ್ಕಶಾಸ್ತ್ರದ ವಸ್ತುವಾದ 'ವಿಚಾರ' ಎನ್ನುವುದು ಸಾಮಾನ್ಯ ಆಲೋಚ (common thinking) ಯಿಂದ ಎಷ್ಟು ಭಿನ್ನವಾಗಿರುತ್ತದೆ ಎಂದು ತಿಳಿ ಕೊಳ್ಳುವುದು ತರ್ಕಶಾಸ್ತ್ರದ ಧ್ಯೇಯವನ್ನೇ ಅರಿಯಲು ಪ್ರಥಮ ಸೋಪಾನ. ಅ ರಿಂದ ಇದನ್ನು ತಿಳಿಯಲು ಪ್ರಯತ್ನಪಡೋಣ.

ಸಾಮಾನ್ಯವಾಗಿ ಮಾನವನಿಗೆ ಸಹಜವಾಗಿಯೇ ಆಲೋಚನೆ ಮಾಡುವ ಶಕ್ತಿ ಇರುತ್ತದೆ. ಆದರೆ ಎಲ್ಲ ಆಲೋಚನೆಗಳೂ ವ್ಯವಸ್ಥಿತವಾಗಿರುವುದಿಲ್ಲ. ಯಾವುದಾದರು ಒಂದೇ ವಿಷಯಕ್ಕೆ ಸಂಬಂಧಿಸಿರುವುದಿಲ್ಲ. ಮನಸ್ಸಿನ ಚಂಚಲತೆಯನ್ನನುಸರಿಸಿ ಆಲೋ ಚನೆಗಳೂ ಹರಿಯುತ್ತಾ ಇರುತ್ತವೆ. ಇವುಗಳಲ್ಲಿ ಅನೇಕವು ಕೇವಲ ಊಹೆಗಳೇ ಇ ಬಹುದು, ಹಗಲು ಕನಸುಗಳೇ ಇರಬಹುದು. ವಿಷಯ ಪ್ರತಿಪಾದನೆಗಳ ಯತ್ನ ಅದರ ಕಾಣದಿರಬಹುದು. ಮನಸ್ಸಿನ ಕ್ರಿಯೆಯಲ್ಲಿ ಕಲ್ಪನೆಗಳಿಗಿಂತ ವಿಕಲ್ಪನೆಗಳೇ ಹೆಚ್ಚಿ ಬಹುದು. ಆದರೆ ಮಾನವನ ವ್ಯವಸ್ಥಿತ ಜೀವನದ ಗುರುತು ಆತನ ವ್ಯವಸ್ಥಿ ಆಲೋಚನಾಕ್ರಮದಲ್ಲಿ ಸಿಗುತ್ತದೆ. ಅನುಭವವನ್ನು ಜಡಭರತನ ಹಾಗೆ ತೆಗೆದುಕೊಂಡಲ್ಲಿ ಮಾನವನು ನಿರಾಯಾಸವಾಗಿ ಕಾಲವನ್ನು ಕಳೆಯಬಹುದು. ಆದರೆ ಅನುಭವದಲ್ಲಿ ಅನೇಕಸಲ ಸಮಸ್ಯೆಗಳನ್ನು ಎದುರಿಸುವಂತಹ ಸನ್ನಿವೇಶಗಳೂ ಬರುತ್ತವೆ. ಇವು ಅನೇಕ. ಇಂತಹುದೇ ಎಂದು ಹೇಳಲು ಸಾಧ್ಯವಿಲ್ಲ. ಯಾವ ಕಾಲಕ್ಕೆ ಬರುತ್ತದೆ ಎಂದು ಸಾರಲೂ ಬರುವುದಿಲ್ಲ. ಸಮಸ್ಯೆ ಬಂದಾಗ 'ಚಿಂತೆ' ಅಥವಾ 'ಚಿಂತನೆ'ಯ ಮೂಲಕ ಅದರ ಪರಿಹಾರವನ್ನು ಮಾನವನು ಹುಡುಕುತ್ತಾನೆ. ಎಂದರೆ ಒಂದು ಘಟನೆ ಹೇಗಾಯಿತು, ಏಕಾಯಿತು, ಅದಕ್ಕೆ ಕಾರಣಗಳೇನು, ಕಾರಣವಿಲ್ಲದೆ ಕಾರ್ಯವಾಗುವುದೇ—ಇವೇ ಮುಂತಾದ ಪ್ರಶ್ನೆಗಳನ್ನು ತನ್ನ ಮನಸ್ಸಿನಲ್ಲೇ ಹಾಕಿಕೊಂಡು ತನ್ನ ಹಿಂದಿನ ಅನುಭವದ ಆಧಾರವನ್ನೂ ತೆಗೆದುಕೊಂಡು ಅದರ ಹಿನ್ನೆಲೆಯ ಮೇಲೆ ನಿರ್ದಿಷ್ಟವಾದ ಪರಿಹಾರವನ್ನು ಕಂಡುಕೊಳ್ಳುತ್ತಾನೆ. ಈ ಪರಿಹಾರವನ್ನು ವಿಶ್ಲೇಷಣೆ ಮಾಡಿದರೆ ಅಂತಹ ಆಲೋಚನಾ ಕ್ರಮದ ವೈಶಿಷ್ಟ್ಯವೇ ಬೇರೆ ಎಂದು ಕಂಡುಬರುತ್ತದೆ. ಆಲೋಚನೆ ಹಂತ ಹಂತವಾಗಿ ಬೆಳೆದಿರುತ್ತದೆ. ಪ್ರತಿಯೊಂದು ಆಲೋಚನೆಗೂ ಸಂಬಂಧವಿರುತ್ತದೆ. ವಿಸ್ತಾರ ಅನು ಭವದ ಹಿನ್ನೆಲೆಯಲ್ಲಿ ಪ್ರಸಕ್ತ ಘಟನೆಗೆ ಸಂಬಂಧ ಹುಡುಕುವುದು ಕಾಣುತ್ತದೆ. ಇಲ್ಲಿ ಕಾರ್ಯಕಾರಣ ಭಾವ ವ್ಯಕ್ತಗೊಂಡಿರುತ್ತದೆ, ಕಾರ್ಯಕ್ಕೂ ಕಾರಣಕ್ಕೂ ಇರುವ ನಿತ್ಯ ಅಥವಾ ಅನಿವಾರ್ಯವಾದ ಸಂಬಂಧ (invariable and necessary relation) ಕಂಡುಬರುತ್ತದೆ. ಇಂತಹ ಲಕ್ಷಣಗಳನ್ನು ಒಳಗೊಂಡ ಜ್ಞಾನ ಅಥವಾ ವಿಚಾರಸರಣಿಯು ಸಾಮಾನ್ಯ ಆಲೋಚನೆಯಿಂದ ವಿಶಿಷ್ಟವಾದ ರೀತಿಯಲ್ಲಿ ವ್ಯತ್ಯಾಸ ಹೊಂದಿರುತ್ತದೆ.

ಜೀವನದ ಯಾವುದೇ ಅಂಶವನ್ನು ಈ ರೀತಿಯ 'ಪರ್ಯಾಲೋಚನೆ'ಗೆ ಈಡುಮಾಡಿ ಅದರ ನಿಯಮಗಳನ್ನೇ ಅಲ್ಲದೆ, ಅದರ ಗುರಿಯನ್ನೂ ಅರ್ಥಮಾಡಿಕೊಳ್ಳುವ ಅಧ್ಯಯನವೇ ತರ್ಕಶಾಸ್ತ್ರ, ಅದನ್ನು ಜೀವನದಲ್ಲಿ ತರುವುದೇ ತರ್ಕ ಕಲೆ. ಗ್ರೀಕ್ ಮೇಧಾವಿ ಸಾಕ್ರಟೀಸನು 'ವಿಚಾರಕ್ಕೆ ಒಳಪಡಿಸದ ಜೀವನ ವ್ಯರ್ಥಜೀವನ' ಎನ್ನುತ್ತಾನೆ.[1] ಹೀಗೆ ಲಘು ಯೋಚನೆಗೂ ಅರ್ಥವತ್ತಾದ ಯೋಚನೆಗೂ ವ್ಯತ್ಯಾಸವಿದೆ. ಲಘುಯೋಚನೆಯಲ್ಲೇ ತೃಪ್ತಿಹೊಂದಿದ ಜೀವಿ ಸಾಮಾನ್ಯ ಪ್ರಾಣಿಯಂತಿರುತ್ತಾನೆ. ವಿಚಾರವಂತನು ವಿಚಾರ ಸಂಪತ್ತನ್ನು ಬೆಳೆಸುವುದರಲ್ಲಿ ಸದಾ ಅತೃಪ್ತನಾಗಿರುತ್ತಾನೆ. ಎಂದರೆ ಆತನ ಗಮನ ಊರ್ಧ್ವಗಮನ. ಆತನು ಮಾನವನ ಪೀಳಿಗೆಯನ್ನೇ ವಿಕಾಸದ ಮಾರ್ಗದಲ್ಲಿ ಕೊಂಡೊಯ್ದು ಹೊಸ ಮಾರ್ಗದರ್ಶನ ನೀಡುವಂತಹ ಧ್ಯೇಯವಾದಿ. ಅಂತಹವರ ಜೀವನವೇ ಸಾರ್ಥಕ ಎನ್ನಬಹುದು.[2] ಸಾಮಾನ್ಯ ಜ್ಞಾನವನ್ನು ವಿಜ್ಞಾನವನ್ನಾಗಿ ಮಾಡುವ ತಾರ್ಕಿಕ ಪ್ರವೃತ್ತಿಯಿಂದಲೇ ಅನೇಕ ರೀತಿಯ ವ್ಯವಸ್ಥಿತ ಜ್ಞಾನ ವಿಭಾಗಗಳು ಬಂದಿವೆ. ವಿಜ್ಞಾನವೆಂದರೆ ವ್ಯವಸ್ಥಿತ ಜ್ಞಾನ ಎಂದರ್ಥ. ಇದರ ಸಂಖ್ಯೆ ದಿನದಿನಕ್ಕೂ ಬೆಳೆಯುತ್ತಿದೆ. ಎಲ್ಲ ವಿಚಾರಗಳಲ್ಲೂ ಸೂಕ್ಷ್ಮ ಹಾಗೂ ವಿಸ್ತಾರವಾದ ಪರಿಜ್ಞಾನ ಬೆಳೆಯಬೇಕಾದರೆ ಲಘು ಆಲೋಚನೆ ನಿರ್ದಿಷ್ಟವಾದ ಹಾಗೂ ನಿರ್ದುಷ್ಟವಾದ ವಿಜ್ಞಾನಕ್ಕೆ ಎಡೆಕೊಡಬೇಕು. ತರ್ಕಶಾಸ್ತ್ರದ ಉದ್ದೇಶ ಸಾಮಾನ್ಯ ಆಲೋಚನೆಯನ್ನು 'ವಿಚಾರ'ವನ್ನಾಗಿ ಪರಿವರ್ತಿಸುವುದೇ ಆಗಿದೆ.

## ತರ್ಕ ಎಲ್ಲ ಶಾಸ್ತ್ರಗಳಿಗೂ ಬುನಾದಿ

ತರ್ಕಶಾಸ್ತ್ರವನ್ನು ಈ ರೀತಿಯಲ್ಲಿ 'ವಿಚಾರ-ವಿಜ್ಞಾನ' ಎಂದು ಕರೆಯುವುದರಲ್ಲಿ ಒಂದು ಮಹತ್ವವಾದ ಸಂಗತಿ ಅಡಗಿದೆ ಎಂದು ಈಗಾಗಲೇ ನಾವು ಗಮನಿಸಿರಬಹುದು. ಅದು ಎಲ್ಲ ಶಾಸ್ತ್ರಾಧ್ಯಯನಗಳಿಗೂ ವಸ್ತು ಅಥವಾ ಮಾಧ್ಯಮವಾದ ಮಾನಸಿಕ ಕ್ರಿಯೆಯಾದ ಆಲೋಚನೆ, ವಿಚಾರ, ಅಥವಾ ಜ್ಞಾನಕ್ಕೆ ಸಂಬಂಧಿಸಿದೆ. ಎಂದರೆ, ಎಲ್ಲ ಶಾಸ್ತ್ರ ಮತ್ತು ಅಧ್ಯಯನಗಳೂ ಸುಸೂತ್ರವಾಗಿ, ಸುವ್ಯವಸ್ಥಿತವಾಗಿ ಬೆಳೆಯಬೇಕಾದರೆ ಅವು 'ವಿಚಾರ-ಶುದ್ಧ'ವಾಗಿರಬೇಕು. ಎಂದರೆ ಆಲೋಚನೆಯ ಕ್ರಮ ನಿರ್ದುಷ್ಟ ಅಥವಾ ದೋಷರಹಿತವಾಗಿರಬೇಕು. ಉಪಕಲ್ಪನೆ (hypothesis)ಗೂ ಸಿದ್ಧಾಂತಕ್ಕೂ (conclusion ) ಸಂಬದ್ಧತೆ ಇರಬೇಕು, ಎಂದು ಹೇಳಿದಂತಾಯಿತು. ಹೀಗೆ ವಸ್ತು ನಿರೂಪಣೆ

---

1. "An unexamined life is not worth living."
2. "A Socrates unsatisfied is better than a pig satisfied."

(definition), ಪ್ರತಿಪಾದನೆ ಅಥವಾ ವಿವರಣೆ (explanation) ಮತ್ತು ವಿಚಾರ-ಅನುಕ್ರಮಣಿಕೆ(succession of thought or argument) ಇವುಗಳಲ್ಲಿ ಎಲ್ಲ ಶಾಸ್ತ್ರಗಳೂ ತಾರ್ಕಿಕ ನಿಯಮಗಳನ್ನು ಅನುಸರಿಸಲೇ ಬೇಕಾಗುವುದು ಅಗತ್ಯ. ಅಸಂಗತ ಆಲೋಚನೆಗಳ ಸಮುದಾಯ ಶಾಸ್ತ್ರವಾಗಲಾರದು, ಅಧ್ಯಯನ ಆಗಲಾರದು. ಆದ್ದರಿಂದ ಅಸಂಗತೆ, ಅಸಂಬದ್ಧತೆ ಮುಂತಾದುವನ್ನು ನಿವಾರಣೆ ಮಾಡಿ ವಿಚಾರ-ಶುದ್ಧಿಯನ್ನು ಕಾಪಾಡುವ ಶಾಸ್ತ್ರವಾದ ತರ್ಕಶಾಸ್ತ್ರ, ಸಹಜವಾಗಿಯೇ ಶಾಸ್ತ್ರಗಳ ಸಮುದಾಯದಲ್ಲಿ ಮುಖ್ಯಪಾತ್ರವನ್ನು ವಹಿಸಲೇಬೇಕು. ಈ ಕಾರಣದಿಂದ ತರ್ಕಶಾಸ್ತ್ರವನ್ನು "ಶಾಸ್ತ್ರಗಳ ಶಾಸ್ತ್ರ" ಅಥವಾ "ವಿಜ್ಞಾನಗಳ ವಿಜ್ಞಾನ" (Science of the Sciences) ಎನ್ನುತ್ತಾರೆ. ಜ್ಞಾನಸಂಪಾದನೆಯ ವ್ಯವಸ್ಥಿತ ರೀತಿಯನ್ನು ತರ್ಕಶಾಸ್ತ್ರವು ಎಲ್ಲ ಶಾಸ್ತ್ರಗಳಿಗೆ ತೋರಿಸಿಕೊಟ್ಟು, ಅವುಗಳ ಬುನಾದಿ ಎಂದು ನಾವು ಹೇಳಿದರೂ, ಶಾಸ್ತ್ರಗಳಿಗೇ ಅಲ್ಲದೆ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಅದು 'ವಿವೇಕ'ವನ್ನು ಹುಟ್ಟಿಸುವಂತಹ ಕೈದೀವಿಗೆಯಾಗಿರುತ್ತದೆಂದೂ ತಿಳಿಯಬೇಕು. ಏಕೆಂದರೆ ಭಾವಪರವಶತೆಯಿಂದ ಅಥವಾ ಅಲ್ಪ ಜ್ಞಾನ, ಅಜ್ಞಾನಗಳಿಂದ ವಿಚಾರ ಮಾಂದ್ಯತೆ ಉಂಟಾದಾಗ ಮಾನವನು 'ಅವಿಚಾರಿ' ಅಥವಾ 'ಅವಿವೇಕಿ'ಯಾಗಿ ವರ್ತಿಸಿ ಪ್ರಾಣಿಯಂತೆ ನಡೆದುಕೊಳ್ಳಬಹುದು. ಇಂತಹ ಸಂದರ್ಭಗಳಲ್ಲೂ, ಎಂದರೆ ಜೀವನದಲ್ಲಿ ವಿವೇಕವನ್ನು ಹುಟ್ಟಿಸುವ ದೃಷ್ಟಿಯಿಂದಲೂ, ತರ್ಕಶಾಸ್ತ್ರವು ನಮಗೆ ಸಹಾಯಕವಾಗಿರುತ್ತದೆ.

### ತರ್ಕಶಾಸ್ತ್ರವು ವಿಜ್ಞಾನವೇ, ಕಲೆಯೇ ?

ತರ್ಕ ಶಾಸ್ತ್ರ 'ವಿಜ್ಞಾನ'ವೇ ಅಥವ 'ಕಲೆ'ಯೇ, ಎನ್ನುವ ಪ್ರಶ್ನೆ ತಲೆದೋರಬಹುದು. ಈ ಪ್ರಶ್ನೆ ಅಷ್ಟೇನೂ ಮುಖ್ಯವಲ್ಲದಿದ್ದರೂ, ಇವೆರಡರ ವ್ಯತ್ಯಾಸವನ್ನು ತಿಳಿದುಕೊಂಡು, ಹೇಗೆ ತರ್ಕಶಾಸ್ತ್ರವು ಈ ಎರಡರ ಗುಣಗಳನ್ನೂ ಹೊಂದಿದೆ ಎಂದು ತಿಳಿಯಲು ಸಹಾಯಕವಾಗಿದೆ. 'ವಿಜ್ಞಾನ' ಅಥವಾ "ಕಲೆ' ಎನ್ನುವ ವಿಶೇಷಣಗಳು ಸಾಮಾನ್ಯ ಅಥವಾ ಲಘುವಾದ ಆಲೋಚನಾ ತರಂಗಗಳಿಗಂತೂ ಅನ್ವಯುವಾಗುವುದಿಲ್ಲ. ಏಕೆಂದರೆ ಅಂತಹ ಲಹರಿಗಳಿಗೆ ಯಾವ ಕ್ರಮವೂ ಇರುವುದಿಲ್ಲ, ಯಾವ ಉದ್ದೇಶವೂ ಇರುವುದಿಲ್ಲ. ಅಂತಹವು ಕೇವಲ ಹಗಲುಗನಸುಗಳಾಗಿರುತ್ತವೆ. ಜೀವನದಲ್ಲಿ ಸ್ವಾಭಾವಿಕವಾಗಿಯೇ ಬರುವ ಯೋಚನೆ, ಆಲೋಚನೆ ಎನ್ನುವ ಮಾನಸಿಕ ಕ್ರಿಯೆಯನ್ನು 'ಸಂಸ್ಕಾರ'ಗೊಳಿಸದ ಹೊರತು ಯಾರೊಬ್ಬನೂ 'ಬುದ್ಧಿಜೀವಿ' ಎನಿಸಿಕೊಳ್ಳಲಾರ. ತಾನು ಮಾಡುವ ಆಲೋಚನೆಯಲ್ಲಿ ಒಂದು ರೀತಿ, ನೀತಿ ಅಥವಾ ನಿಯಮ ಇರುತ್ತದೆ, ಇರಬೇಕು ಎನ್ನುವುದನ್ನು ಕಂಡುಕೊಳ್ಳದ ಹೊರತು ಅದು 'ವಿಜ್ಞಾನ' ಆಗುವುದಿಲ್ಲ. ಹಾಗೆಯೇ ಆ ರೀತಿ, ನೀತಿ, ನಿಯಮಗಳನ್ನು ಅನುಸರಿಸಿ, ಅಭ್ಯಾಸಮಾಡದ ಹೊರತು ಅದು 'ಕಲೆ' ಆಗುವುದಿಲ್ಲ.

ಎಂದರೆ ಬುದ್ಧಿ, ವಿಚಾರ, ಆಲೋಚನೆ ಎನ್ನುವುದು ಏನು ಎಂದು ತಿಳಿದುಕೊಳ್ಳುವುದು 'ವಿಜ್ಞಾನ'ವಾದರೆ, ಅದನ್ನು ಬಳಸುವುದು 'ಕಲೆ'ಯಾಗುತ್ತದೆ. ಒಬ್ಬನು ವಿಚಾರಮಾಡುವುದರಲ್ಲಿ ಈ ಎರಡೂ ಇರುವುದರಿಂದ ತರ್ಕವು ವಿಜ್ಞಾನವೂ ಆಗುತ್ತದೆ ಕಲೆಯೂ ಆಗುತ್ತದೆ. Science helps us to *know*, art helps us to *do*, ಎನ್ನುತ್ತಾರೆ. ತರ್ಕದ ವಿಚಾರದಲ್ಲಿ ಎರಡೂ ಸತ್ಯ. ಜ್ಞಾನ ಸಂಪಾದನೆಯನ್ನು ತೆಗೆದುಕೊಂಡಲ್ಲಿ ತರ್ಕಶಾಸ್ತ್ರವು ಬುದ್ಧಿ, ವಿಚಾರ ಇವುಗಳ ಬಗ್ಗೆ ಸವಿಸ್ತಾರವಾದ ಜ್ಞಾನವನ್ನು ಸಂಪಾದಿಸುತ್ತದೆ. ಅವುಗಳ ಸ್ವಭಾವ, ಗುಣ, ಪಾಲಿಸುವ ನಿಯಮಗಳು ಎಲ್ಲವನ್ನು ತಿಳಿಯುತ್ತದೆ. ವಿಚಾರವು ಸತ್ಯದ ಹಾದಿಯಲ್ಲಿರಬೇಕಾದರೆ ಇಂತಹ ನಿಯಮಗಳನ್ನೇ ಅನುಸರಿಸಬೇಕು ಎಂದು ವಿಧಿಸುತ್ತದೆ. ಈ ನಿಯಮಗಳು ಸಾರ್ವತ್ರಿಕವಾಗಿದ್ದು, ಸತ್ಯವನ್ನು ಹುಡುಕಬೇಕು ಎಂದು ಹವಣಿಸುವವರೆಲ್ಲಾ ಆ ಮಾರ್ಗವನ್ನೇ ತುಳಿಯಬೇಕಾಗುತ್ತದೆ. ಎಂದರೆ ನಮ್ಮ ಆಲೋಚನೆ, ವಿಚಾರ ಇತ್ಯಾದಿ ಸತ್ಯವಾಗಿರಬೇಕಾದರೆ ನಿಯಮಬದ್ಧವಾಗಿರಬೇಕು. ಅಲ್ಲದೆ ತರ್ಕನೀಡುವ ಜ್ಞಾನ 'ವಿಜ್ಞಾನ'ಕ್ಕೆ ತಕ್ಕ ಲಕ್ಷಣದಂತೆ ಅದನ್ನು ಬಳಸಲೂ ಸಹಾಯಕವಾಗುತ್ತದೆ. ಎಂದರೆ ನೀತಿನಿಯಮಗಳನ್ನು ತಿಳಿದವನು, ಹಾಗೆಯೇ ಯೋಚಿಸಬಹುದು. ಮತ್ತು ದೋಷಗಳನ್ನು ತಪ್ಪಿಸಿಕೊಳ್ಳಬಹುದು. ಈ ಎಲ್ಲ ಕಾರಣಗಳಿಂದ ತರ್ಕವು ವಿಜ್ಞಾನವೇ.

ಅದು ಕಲೆಯೂ ಕೂಡ. ಪ್ರಥಮವಾಗಿ, ಕಲೆ ಎಂದರೆ ಸ್ವಾಭಾವಿಕವಾದ ಚರ್ಯೆ. ಆಲೋಚನೆ ಮಾಡುವುದನ್ನು ಯಾರಿಗೂ ಕಲಿಸಿಕೊಡಬೇಕಾಗಿಲ್ಲ. ಜಾನ್ ಲಾಕ್ ಎಂಬ ಪಾಶ್ಚಾತ್ಯ ವಿದ್ವಾಂಸನು ಹೇಳಿರುವಂತೆ 'ದೇವರು ಮಾನವನನ್ನು ಎರಡು ಕಾಲಿನ ಪ್ರಾಣಿಯಂತೆ ಮಾಡಿ ಆತನನ್ನು ತಾರ್ಕಿಕನನ್ನಾಗಿ ಮಾಡಲು ಅರಿಸ್ಟಾಟಲನ ವಶಕ್ಕೆ ಕೊಡಲಿಲ್ಲ.' ಇದು ನಿಜ. ಆದರೆ ಎಲ್ಲ ಎರಡು ಕಾಲಿನ ಮನುಷ್ಯರಲ್ಲೂ ವಿಚಾರವು ತಾರ್ಕಿಕವಾಗಿರುವುದಿಲ್ಲ. ಹಾಗಾದರೆ ಅದು ಕಲೆ ಹೇಗೆ ? ಕಲೆ ಎಂದರೆ ಕೇವಲ ಸ್ವಾಭಾವಿಕ ಚರ್ಯೆ ಅಲ್ಲ. ಕರ್ಮದಲ್ಲಿ ಅಥವಾ ಕ್ರಿಯೆಯಲ್ಲಿ ನೈಪುಣ್ಯ. ಈ ನೈಪುಣ್ಯ ಬರಬೇಕಾದರೆ ಅದಕ್ಕೆ ಅಭ್ಯಾಸದ ಹಿನ್ನೆಲೆ ಬೇಕು. ಸಹಜವಾಗಿಯೇ ಒಬ್ಬನು ತನ್ನ ಯೋಚನಾ ಶಕ್ತಿಯನ್ನು ಒಳ್ಳೆಯ ನಿಯಮಗಳ ಹಾದಿಯಲ್ಲೇ ನಡೆಸಬಹುದು. ಅದರಿಂದ ಅವನ ವಿಚಾರ 'ಸತ್ಯ' ಎನಿಸಿಕೊಳ್ಳಬಹುದು. ಆದರೆ ತನ್ನ ಸ್ವಾಭಾವಿಕ ಕುಶಲತೆಯನ್ನೇ ಮತ್ತೂ ಪರಿಣತ ಸ್ಥಿತಿಗೆ ತರಬೇಕಾದರೆ ತನ್ನ ಆಲೋಚನಾಶಕ್ತಿಯ ಸ್ವರೂಪವನ್ನು ವಿವೇಚನೆಯಿಂದ ತಿಳಿಯಬೇಕಾಗುತ್ತದೆ. ಈ ಸ್ವರೂಪವನ್ನೇ ಗಮ್ಯವಾಗಿಟ್ಟುಕೊಂಡು ಅಧ್ಯಯನಮಾಡಿರುವ ತರ್ಕ ವಿಜ್ಞಾನವು ಇರುವಾಗ ಅದರ ಸಹಾಯದಿಂದ ಸ್ವಾಭಾವಿಕ ಕುಶಲತೆಯು ಪರಿಣಿತ-ಕಲೆ ಎನಿಸಿಕೊಳ್ಳುತ್ತದೆ. ಎಂದರೆ ಕಲೆಗೆ ಪೂರ್ಣತ್ವವನ್ನು ಕೊಡಬೇಕಾದರೆ ಜ್ಞಾನದ ಹಿನ್ನೆಲೆ ಬೇಕು. ಇದರಿಂದ ನಮಗೆ ಗೊತ್ತಾಗುವುದೇನೆಂದರೆ

ತರ್ಕಶಾಸ್ತ್ರವನ್ನು ಅಭ್ಯಾಸಮಾಡಿದವರೂ ಕೂಡ ಸರಿಯಾದ ಮಾರ್ಗದಲ್ಲೇ ವಿಚಾರ ಮಾಡುತ್ತಿದ್ದರೂ, ಅದರ ಅಭ್ಯಾಸಮಾಡುವುದರಿಂದ ಅವರ ಕುಶಲತೆ ಹೆಚ್ಚಾಗುತ್ತದೆಂದು ವಿಶದವಾಗುತ್ತದೆ. ಇದೇ ತರ್ಕಶಾಸ್ತ್ರದ ಫಲ.

ತರ್ಕಶಾಸ್ತ್ರದ ಎಲ್ಲ ವಿಭಾಗಗಳಲ್ಲೂ ಪರಿಣತನಾದವನೂ ಕೂಡ ಅನೇಕ ವೇಳೆ ವಿಚಾರ ಕ್ರಮದಲ್ಲಿ ಯಾವ ದೋಷಗಳನ್ನು ಎಸಗಬಾರದೋ ಅಂತಹ ದೋಷಗಳನ್ನೇ ಮಾಡುವುದಿಲ್ಲವೇ ಎಂದು ಕೇಳಬಹುದು. ಇದು ನಿಜ. ಶಾಸ್ತ್ರಾಭ್ಯಾಸ ಮಾಡಿದವನ ವಿಚಾರದಲ್ಲೂ ದೋಷಗಳು ಬರುತ್ತವೆ. ಇದಕ್ಕೆ ಕಾರಣ ಶಾಸ್ತ್ರದ್ದಲ್ಲ. ಶಾಸ್ತ್ರವು ನಿಯಮಗಳನ್ನೆಲ್ಲಾ ವ್ಯವಸ್ಥಿತ ರೀತಿಯಲ್ಲೇ ಹಾಕಿರುತ್ತದೆ. ಅದರ ಪೂರ್ಣಪರಿಜ್ಞಾನ ಅಭ್ಯಾಸಿಗೂ ಇರುತ್ತದೆ. ತಾತ್ವಿಕವಾಗಿ ಶಾಸ್ತ್ರದ ಸ್ವಭಾವ, ಲಕ್ಷಣ ಇತ್ಯಾದಿಗಳ ಬಗ್ಗೆ ವಿಚಾರಮಾಡಿದಾಗ ತರ್ಕಶಾಸ್ತ್ರದ ಅಭ್ಯಾಸಿ ತರ್ಕಸಮಸ್ಯೆಗಳಿಗೆ ಸಮರ್ಪಕವಾದ ಉತ್ತರಗಳನ್ನೇ ನೀಡುತ್ತಾನೆ. ಇಷ್ಟರ ಮಟ್ಟಿಗೆ ಸರಿ. ಆದರೆ ತನ್ನ ಜೀವನದಲ್ಲಿ ಅನೇಕ ಸಲ, ತನಗೆ ಗೊತ್ತಿಲ್ಲದ ಹಾಗೆ ತಾರ್ಕಿಕ ದೋಷಗಳನ್ನು ಎಸಗಬಹುದು. ಇದರಿಂದ ನಮಗೆ ತಿಳಿಯುವುದೇನೆಂದರೆ ತರ್ಕಶಾಸ್ತ್ರವು ಮೂಲತಃ ಶಾಸ್ತ್ರಾಧ್ಯಯನ, ಅಥವಾ ವಿಜ್ಞಾನ. ತರ್ಕದ ವಿಚಾರದಲ್ಲಿ 'ಕಲೆ'ಯು ಗೌಣವೆಂದೇ ಹೇಳಬೇಕು.

ತರ್ಕಶಾಸ್ತ್ರವನ್ನು ಅಭ್ಯಾಸಮಾಡಿದವನ ಗುರಿ ತನ್ನ ಅಧ್ಯಯನವನ್ನು ಕೇವಲ ಶಾಸ್ತ್ರ ಅಥವಾ ವಿಜ್ಞಾನವೆನ್ನುವ ಮಟ್ಟದಲ್ಲೇ ನಿಲ್ಲಿಸದೆ ಗೌಣವೆನ್ನಲಾಗುವ ಕಲಾಂಶವನ್ನೂ ವೃದ್ಧಿಪಡಿಸಬೇಕೆನ್ನುವುದು. ಎಲ್ಲ ವೈಜ್ಞಾನಿಕ ಅಧ್ಯಯನವೂ ಕೊನೆಗೆ ಕಲೆ ಅಥವಾ ಪ್ರಯೋಗಕ್ಕೆ ದಾರಿ ಮಾಡಿಕೊಡುವ ಲಕ್ಷಣಗಳನ್ನು ಹೊಂದಿರುವುದರಿಂದ ಅದರ ಉಪಯೋಗವನ್ನು ಪಡೆಯುವ ಗುರಿ ನಮ್ಮದಾಗಿರಬೇಕು.

## ತರ್ಕಶಾಸ್ತ್ರ ಮತ್ತು ಇತರ ಶಾಸ್ತ್ರಗಳೊಡನೆ ಅದರ ಸಂಬಂಧ

ತರ್ಕಶಾಸ್ತ್ರವು ಎಲ್ಲ ಅಧ್ಯಯನಗಳ, ವಿಜ್ಞಾನಗಳ ಉಪಕರಣವಾದ ಬುದ್ಧಿ ಅಥವಾ ಯೋಚನಾ ಶಕ್ತಿಯನ್ನು ತನ್ನ ಸ್ವಂತ ಅಧ್ಯಯನ ವಸ್ತುವನ್ನಾಗಿ ಮಾಡಿಕೊಂಡು ಅದರ ರೀತಿ, ನೀತಿ, ನಿಯಮಗಳನ್ನು ಹಾಕಿಕೊಡುವುದೆಂಬುದನ್ನು ನಾವು ನೋಡಿದ್ದೇವೆ. ಎಂದರೆ ಈ ಮೂಲಕ ತರ್ಕಶಾಸ್ತ್ರಕ್ಕೂ ಇತರ ಎಲ್ಲ ಅಧ್ಯಯನ ಅಥವಾ ಶಾಸ್ತ್ರಗಳಿಗೂ ಸಂಬಂಧ ಇದ್ದೇ ಇರಬೇಕು ಎಂದು ಹೇಳಿದಂತಾಯಿತು. ಸಾಮಾನ್ಯವಾಗಿ ಎಲ್ಲ ಶಾಸ್ತ್ರಗಳೂ ತರ್ಕದ ಮೇಲೆ (ಅದರ ನಿಯಮಗಳಿಗಾಗಿ, ವ್ಯವಸ್ಥಿತ ಕ್ರಮಕ್ಕಾಗಿ) ಆಧಾರ ಹೊಂದಿ, ತಮ್ಮ ಸಂಬಂಧವಿಟ್ಟುಕೊಂಡಿದ್ದರೂ, ಕೆಲವು ಶಾಸ್ತ್ರಗಳು ತಾವು ಕೂಡ ನೇರವಾಗಿ ಮಾನಸಿಕ ಕ್ರಿಯೆಯನ್ನೇ ವಸ್ತುವನ್ನಾಗಿಟ್ಟುಕೊಂಡು ಅಧ್ಯಯನ ನಡೆಸುವುದರಿಂದ, ಹೆಚ್ಚಿನ ಸಂಬಂಧ ಹೊಂದಿವೆ. ಅಂತಹವುಗಳಲ್ಲಿ ಬಹು ಸಮೀಪವಾದವು ಭಾಷೆ

ಮತ್ತು ವ್ಯಾಕರಣ, ಮನಶ್ಶಾಸ್ತ್ರ, ತತ್ವಶಾಸ್ತ್ರ ಇವು. ಇವುಗಳ ಸಂಬಂಧವನ್ನು ನಾವು ಇಲ್ಲಿ ಗಮನಿಸಬೇಕು.

**ಭಾಷೆ, ವ್ಯಾಕರಣ ಮತ್ತು ತರ್ಕಶಾಸ್ತ್ರ**

ಮೂಲತಃ ಎಲ್ಲ ಆಲೋಚನೆ ಅಥವಾ ವಿಚಾರಗಳನ್ನೂ ಭಾಷೆಯು ಮೂಲಕವೇ ವ್ಯಕ್ತಮಾಡಬೇಕು. ವಸ್ತುತಃ ಭಾಷೆಯ ಬೆಳವಣಿಗೆಯಿಂದಲೇ ಮಾನವನ ಸಂಸ್ಕೃತಿಯೂ ಬೆಳೆಯಿತು. ಆದ್ದರಿಂದ ಆಲೋಚನೆಗೆ ಮಾಧ್ಯಮ ಭಾಷೆಯೆ ಆಗಿರಬೇಕು. ಕೇವಲ ಸಂಜ್ಞಾರೂಪದ ಭಾಷೆಯೂ (symbolic or gesture language) ಭಾಷೆಯಾದರೂ ಅದು ಕೇವಲ ಮೂಲಭೂತ ಪ್ರವೃತ್ತಿಗಳನ್ನು ವ್ಯಕ್ತಮಾಡಲು ಸಹಾಯವಾದೀತೇ ಹೊರತು, ಅಭಿಪ್ರಾಯ ಸಂಪತ್ತನ್ನು ಬೆಳಸಲು ಸಹಾಯಕವಾಗುವ ಮಾಧ್ಯಮವಾಗಲಾರದು. ಸಂಜ್ಞೆಗೆ ಬದಲು ಶಬ್ದದ ಬಳಕೆ ಬಂದಮೇಲೆ ಒಂದು ರೀತಿಯ ಸಂಜ್ಞಾಭಾಷೆ ಹುಟ್ಟಿಕೊಳ್ಳಬಹುದು. ಇದರ ಪ್ರಯೋಗವೇ ಬೇರೆ, ಉದ್ದೇಶವೇ ಬೇರೆ ಮತ್ತು ಪರಿಣಾಮವೇ ಬೇರೆ. ಮೂಕನ ಭಾಷೆ ಮೊದಲನೆಯದಾದರೆ, ಎರಡನೆಯ ರೀತಿಯ ಭಾಷೆ ಪ್ರಗತಿ ಹೊಂದಿದ ಸಮಾಜದ ತಾಂತ್ರಿಕ ಭಾಷೆ (technical symbol) ಇದನ್ನು ನಾವು ಈಗ ಎಲ್ಲ ಶಾಸ್ತ್ರಗಳಲ್ಲೂ ಉಪಯೋಗಿಸುತ್ತೇವೆ. ಸೂತ್ರಗಳ ರೂಪದಲ್ಲಿ ನಾವು ನೀಡುವ ಚಿಹ್ನೆಗಳು, ಉದಾಹರಣೆಗೆ, $E=mc^2$ ಎನ್ನುವುದು ಅಪಾರವಾದ ಅರ್ಥವನ್ನೇ ಹೊಂದಿರುತ್ತದೆ. ಈ ರೀತಿಯ ಸಂಜ್ಞೆಯ ಬಳಕೆ ಪ್ರಗತಿಯ ಗುರುತು. ಸ್ವಲ್ಪದರಲ್ಲಿ ವಿಸ್ತಾರವಾದ ಅರ್ಥವನ್ನು ಸೂಚಿಸುವಂತಹ ಸಾಧನ. ಈ ಭಾಷೆಯ ವಿಚಾರ ನಾವು ಹೆಚ್ಚು ಹೇಳಬೇಕಾಗಿಲ್ಲ. ಪ್ರಸ್ತುತ ಭಾಷೆ ನಾವು ಆಡುವ ಭಾಷೆ. ಪದ ಮತ್ತು ವಾಕ್ಯಗಳ ಸಮುದಾಯ. ಇದರ ವಿಚಾರ ನಡೆಸುವಂತಹದು ವ್ಯಾಕರಣಶಾಸ್ತ್ರ. ಭಾಷೆ ಎನ್ನುವುದು ವ್ಯಾಕರಣಕ್ಕೂ, ತರ್ಕಶಾಸ್ತ್ರಕ್ಕೂ ಸಮಾನವಾದ ವಸ್ತು. ಆದರೆ ಆ ವಸ್ತುವನ್ನು ನೋಡುವ, ವಿಶ್ಲೇಷಿಸುವ ದೃಷ್ಟಿ ಎರಡರಲ್ಲೂ ಬೇರೆ ಬೇರೆ. ನಾವು ಅರಿತಿರುವಂತೆ ವ್ಯಾಕರಣವು ಭಾಷಾ ರಚನೆಯಲ್ಲಿ ಎಂದರೆ ವಾಕ್ಯಗಳ ರಚನೆಯಲ್ಲಿ ಹೆಚ್ಚು ಆಸಕ್ತಿ ವಹಿಸಿ ಅದಕ್ಕೆ ತಕ್ಕುದಾದ ನಿಯಮಗಳನ್ನು ಹಾಕುತ್ತದೆ. ಭಾಷೆಯ ಅರ್ಥದ ಕಡೆ ಅದರ ದೃಷ್ಟಿ ಗೌಣ ಎಂದರೆ ತಪ್ಪಲ್ಲ. ಕರ್ತೃ ಕ್ರಿಯಾ ಕರ್ಮ ಪದಗಳ ಜೋಡಣೆ, ಅವುಗಳ ವಿಭಕ್ತಿ ಪ್ರತ್ಯಯ, ಇತ್ಯಾದಿ ಸರಿಯಿದ್ದರೆ ವ್ಯಾಕರಣ ಶುದ್ಧ ಭಾಷೆ ಎಂದಾಗುತ್ತದೆ. ಎಂದರೆ ವ್ಯಾಕರಣ-ನಿಯಮಬದ್ಧ ಭಾಷೆ ವ್ಯಾಕರಣದ ಗುರಿ. ಆದರೆ ತರ್ಕವು ಭಾಷೆಯನ್ನು ನೋಡುವ ದೃಷ್ಟಿ ಬೇರೆ. ಅದು ಸರಳವಾಗಿದೆಯೇ, ಸ್ಫುಟವಾಗಿದೆಯೇ ಸತ್ಯವನ್ನು ವ್ಯಕ್ತಪಡಿಸುತ್ತದೆಯೇ ಎನ್ನುವುದೇ ಅದರ ಮುಖ್ಯಗುರಿ. ಇದಕ್ಕೆ ಭಾಷೆಯ ರಚನೆ ಬೇಕಾಗಿದ್ದರೂ ಸತ್ಯದ ಅಭಿವ್ಯಕ್ತಿಯೇ ಮುಖ್ಯ. ಒಂದು ರೀತಿಯಲ್ಲಿ ನೋಡಿದರೆ ಈ

ಎರಡು ಶಾಸ್ತ್ರಗಳೂ ಧ್ಯೇಯಪೂರ್ವಕವಾದವುಗಳೇ–ಒಂದರಲ್ಲಿ ಧ್ಯೇಯವು ವಾಕ್ಯ ಅಥವಾ ಪದರಚನೆಯಾದರೆ, ಮತ್ತೊಂದರಲ್ಲಿ ಸತ್ಯದ ಅಭಿವ್ಯಕ್ತಿ ಮತ್ತು ಅದಕ್ಕೆ ಸಹಾಯಕವಾಗುವಂತಹ ನಿಯಮಗಳ ಪಾಲನೆ. ಹೀಗೆ ವಸ್ತುವನ್ನು ಬಳಸುವುದರಲ್ಲಿ ವ್ಯತ್ಯಾಸ ಹೊಂದಿದ್ದರೂ ಈ ಶಾಸ್ತ್ರಗಳೆರಡೂ 'ಧ್ಯೇಯವಾದಿ'ಗಳು(normative science). ಧ್ಯೇಯವನ್ನೇ ಮುಖ್ಯವಾಗಿ ಪಡೆದಿರುವುದರಲ್ಲಿ ಸಮಾನತೆಯನ್ನು ಹೊಂದಿರುವ, ಶಾಸ್ತ್ರಗಳನ್ನು ಹಲವು ಸಲ ಹೇಳುವಾಗ 'ವ್ಯಾಕರಣವು ಭಾಷೆಯ ತರ್ಕ, ತರ್ಕವು ವಿಚಾರ ಅಥವಾ ಆಲೋಚನೆಯ ವ್ಯಾಕರಣ'[1] ಎಂದೂ ಹೇಳಿದ್ದಾರೆ.

ಧ್ಯೇಯದಲ್ಲಿ ಸಮಾನವಾದ ಆಕಾಂಕ್ಷೆಯನ್ನು ಇವು ಹೊಂದಿದ್ದರೂ, ವಸ್ತುವಾದ ಭಾಷೆಯ ಉಪಯೋಗ ಇವೆರಡಕ್ಕೂ ಸಮಾನವಾಗಿದ್ದರೂ, ತರ್ಕವು ಸತ್ಯದ ಅಭಿವ್ಯಕ್ತಿಗೆ ಬೇಕಾಗುವಂತೆ ತನ್ನದೇ ಆದ ಹಲವು ನಿಯಮಗಳನ್ನು ಹಾಕಿಕೊಂಡು ವಾಕ್ಯರಚನೆ ಮಾಡುತ್ತದೆ. ಶಬ್ದಗಳ ವಿಚಾರದಲ್ಲೂ ಅರ್ಥಗಳ ವ್ಯತ್ಯಾಸಗಳನ್ನು ಗಮನಿಸಿ ತನ್ನದೇ ಆದ ವರ್ಗಗಳನ್ನು ಮಾಡಿಕೊಳ್ಳುತ್ತದೆ. ತರ್ಕಶಾಸ್ತ್ರದಲ್ಲಿ ಶಬ್ದಗಳು 'ಪದ'ಗಳಾಗುತ್ತವೆ (ಎಂದರೆ ಸಂಪೂರ್ಣ ಅರ್ಥವನ್ನು ಕೊಡುವಂತಹುದು 'ಪದ') ಪದಗಳು ವರ್ಗೀಕರಣಗೊಳ್ಳುತ್ತದೆ. ಸಾಮಾನ್ಯ ವಾಕ್ಯಗಳು 'ತಾರ್ಕಿಕ ವಾಕ್ಯ' (Logical proposition) ಗಳಾಗುತ್ತವೆ. ಅಭಿಪ್ರಾಯಗಳನ್ನು ವ್ಯಕ್ತ ಮಾಡುವಲ್ಲಿ ಅರ್ಥಕ್ಕೆ ಸರಿಹೊಂದುವ 'ರೂಪ'ಗಳೇ ಬೇರೆಯಾಗಿ ವಿವಿಧ ತಾರ್ಕಿಕ ವಾಕ್ಯಗಳೇ ಆಗುತ್ತವೆ. ಇವೆಲ್ಲವನ್ನೂ ಮುಂದೆ ಸವಿಸ್ತಾರವಾಗಿ ನೋಡುತ್ತೇವೆ. ಆದರೆ ಈಗ ಈ ವಿಜ್ಞಾನಗಳ ಅಂತರ ತಿಳಿದಿದ್ದರೆ ಸಾಕು. ವಾಕ್ಯರಚನೆಯಲ್ಲಿ ವ್ಯಾಕರಣ-ರೂಪ ಬೇರೆ, ತಾರ್ಕಿಕ-ರೂಪ ಬೇರೆ. ವ್ಯಾಕರಣ ಭಾಷೆಗೆ ಗಮನಕೊಟ್ಟರೆ, ತರ್ಕ ಅರ್ಥಕ್ಕೆ ಗಮನಕೊಡುತ್ತದೆ.

## ಮನಶ್ಶಾಸ್ತ್ರ ಮತ್ತು ತರ್ಕ

ಈಗ ತರ್ಕಶಾಸ್ತ್ರ ಮತ್ತು ಮನಶ್ಶಾಸ್ತ್ರ (Psychology) ಗಳ ಸಂಬಂಧವನ್ನು ನೋಡೋಣ. ಇವೆರಡೂ ಮನಸ್ಸಿನ ಚಟುವಟಿಕೆ ಅಥವಾ ಕ್ರಿಯೆಗಳನ್ನು ಅಧ್ಯಯನ ಮಾಡುವ ಶಾಸ್ತ್ರಗಳೇ. ಆದರೆ ಇವೆರಡಕ್ಕೂ ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳನ್ನು ಕ್ಷೇತ್ರ ವೈಶಾಲ್ಯ (scope) ಮತ್ತು ವಸ್ತುವೀಕ್ಷಣಕ್ರಮ (method of study) ಗಳಲ್ಲಿ ನಾವು ಕಾಣಬಹುದು. ಮನಶ್ಶಾಸ್ತ್ರವೆಂಬುದು ಮನಸ್ಸಿನ ಚಟುವಟಿಕೆಗಳನ್ನೆಲ್ಲಾ ತನ್ನ ಗಮ

---

1. "Grammar is the logic of language, and logic is the grammar of thought" ಅಥವಾ "Grammar is the normative science of language, Logic is the normative science of thought". ನೀತಿಶಾಸ್ತ್ರ (Ethics) ವೂ ಒಂದು ಧ್ಯೇಯವಾದಿ ಶಾಸ್ತ್ರ.

ನಕ್ಕೆ ತೆಗೆದುಕೊಳ್ಳುತ್ತದೆ. ಸಾಮಾನ್ಯವಾಗಿ ನಾವೇ ಗುರುತಿಸುವಂತೆ ಮಾನಸಿಕ ಕ್ರಿಯೆಗಳನ್ನು ವಿಚಾರ (thinking) ಭಾವನೆ (feeling) ಮತ್ತು ಇಚ್ಛೆ (willing) ಎಂದು ವಿಂಗಡಿಸಬಹುದು. ಮನಶ್ಶಾಸ್ತ್ರವು ಈ ಮೂರು ಕ್ರಿಯಾರೂಪಗಳನ್ನು ಅಧ್ಯಯನ ಮಾಡುತ್ತದೆ. ಅಷ್ಟೇ ಅಲ್ಲ, ಈ ಕ್ರಿಯೆಗಳನ್ನು ಮಾನವನಲ್ಲೇ ಅಲ್ಲದೆ ಪ್ರಾಣಿಗಳಲ್ಲೂ ನಾವು ಕಾಣಬಹುದು. ಮನಶ್ಶಾಸ್ತ್ರದ ಅಧ್ಯಯನ ಕ್ಷೇತ್ರದಲ್ಲಿ ಇವೂ ಬರುವ ಅಂಶಗಳೇ. ಅಷ್ಟೇ ಅಲ್ಲ, ಮಾನಸಿಕ ಚಟುವಟಿಕೆಗಳು ಪ್ರಾಣಿಗಳ ಜಾಗ್ರತ ಅವಸ್ಥೆಗೆ ಮಾತ್ರ ಸೀಮಿತವಾಗಿಲ್ಲ, ಸ್ವಪ್ನ ಇತ್ಯಾದಿ ಸುಪ್ತ ಚೇತನಾವಸ್ಥೆಯಲ್ಲೂ ಮಾನಸಿಕ ಕ್ರಿಯೆಗಳು ನಡೆಯುತ್ತಲೇ ಇರುತ್ತವೆ. ಅಷ್ಟಕ್ಕೇ ನಿಲ್ಲದೆ ಚೇತನ-ವಿಕಾರಾವಸ್ಥೆ (abnormal psychic condition)ಗಳೂ ಕೂಡ ಮಾನಸಿಕ ಕ್ರಿಯೆಗಳೇ. ಇವೆಲ್ಲವನ್ನೂ ಮನಶ್ಶಾಸ್ತ್ರ ಅಧ್ಯಯನ ಮಾಡಲೇಬೇಕು. ಎಂದರೆ ಅದರ ಕ್ಷೇತ್ರ ಬಹು ವಿಶಾಲವಾಗಿಯೇ ಇರಬೇಕಾದದ್ದು ಅಗತ್ಯ. ಈ ವಿಚಾರದಲ್ಲಿ ತರ್ಕಶಾಸ್ತ್ರದ ದೃಷ್ಟಿ ಸಂಕುಚಿತವಾದದ್ದು. ಈ ಶಾಸ್ತ್ರ ಕೇವಲ 'ವಿಚಾರ'ಕ್ಕೆ ಮಾತ್ರ ಸಂಬಂಧಪಟ್ಟದ್ದು. ಅಷ್ಟೇ ಅಲ್ಲ, ಅದು ಕೇವಲ ಮಾನವನ ವಿಚಾರಕ್ರಮಕ್ಕೇ ಸೀಮಿತವಾದದ್ದು. ಪ್ರಾಣಿಗಳಲ್ಲೂ ವಿಚಾರಕ್ರಮವಿದೆಯೇ, ಅದೂ ತರ್ಕಬದ್ಧವಾಗಿದೆಯೇ ಎನ್ನುವುದನ್ನು ತರ್ಕಶಾಸ್ತ್ರ ಗಮನಿಸುವುದಿಲ್ಲ. ಮಾನವನಲ್ಲೂ ಕೂಡ ಕೇವಲ ಜಾಗ್ರತಾವಸ್ಥೆಯಲ್ಲಿ ಆತನು ಹೇಗೆ ತನ್ನ ಆಲೋಚನಾ ಶಕ್ತಿಯನ್ನು ಬಳಸುತ್ತಾನೆ, ಹೇಗೆ ಬಳಸಬೇಕು ಎನ್ನುವುದನ್ನು ಮಾತ್ರ ಗಮನಿಸುತ್ತದೆ. ಈ ಕಾರಣದಿಂದ ತರ್ಕಶಾಸ್ತ್ರದ ಸೀಮೆ ಸಂಕುಚಿತವಾದದ್ದೆಂದು ಹೇಳಬಹುದು.

ಮತ್ತೊಂದು ವ್ಯತ್ಯಾಸ ಈ ಶಾಸ್ತ್ರಗಳು ತಮ್ಮ ವಸ್ತುವನ್ನು ನೋಡುವ ದೃಷ್ಟಿಯಲ್ಲಿ ಅಡಗಿದೆ. ತರ್ಕಶಾಸ್ತ್ರವು 'ಧ್ಯೇಯವಾದಿ' (Normative Science). ಅದರ ಧ್ಯೇಯ (norm)ವು 'ಸತ್ಯ' (Truth). ಈ ಧ್ಯೇಯವನ್ನು ಸಾಧಿಸುವುದಕ್ಕೆ ಅಗತ್ಯವಾದ ರೀತಿಯ ಎಲ್ಲ ನಿಯಮಗಳನ್ನೂ ಹಾಕಿ ನಾವಾಡುವ ಮಾತು, ವಾಕ್ಯ, ನಾವು ಮಾಡುವ ಆಲೋಚನೆ ಹೇಗೆ ಪಾಲಿಸಿದರೆ 'ಪ್ರಮಾಣ'ಯುತ (valid)ವಾಗುತ್ತದೆ, ಇಲ್ಲದಿದ್ದರೆ ಹೇಗೆ 'ದೋಷ'ಪೂರ್ಣ(erroneous) ಆಗುತ್ತದೆ ಎಂದು ನಿಯಮಗಳನ್ನು ವಿಧಿಸುತ್ತದೆ. ಆದರೆ, ಮನಶ್ಶಾಸ್ತ್ರವು ತನ್ನ ವಸ್ತುವಾದ ಮನಸ್ಸನ್ನು ಅದರ ಸ್ವಾಭಾವಿಕ ಸ್ಥಿತಿಗತಿಗಳಲ್ಲೇ ಅಧ್ಯಯನ ಮಾಡುತ್ತದೆ. ಇದು ಮಾನಸಿಕ ಕ್ರಿಯೆಗಳಲ್ಲಿ ಯಾವ ಧ್ಯೇಯ, ನಿಯಮಗಳನ್ನೂ ಅಪೇಕ್ಷಿಸದೆ ಪ್ರಕೃತಿಯ ಗತಿಯನ್ನೇ ಅವಲಂಬಿಸಿ ಅದರ ಸ್ವಭಾವವನ್ನು ತಿಳಿಸುತ್ತದೆ. ಆದ್ದರಿಂದ ಇದರ ದೃಷ್ಟಿ 'ವಾಸ್ತವಿಕ ದೃಷ್ಟಿ'. ಅದು ವಸ್ತುವಿನ ಗತಿಗಳನ್ನು ಮಾತ್ರ ಗುರುತಿಸುತ್ತದೆ. ನಿಯಮ ನಿಯಂತ್ರಗಳನ್ನು ಹಾಕಿ, ಯಾವುದೋ ಗುರಿಯ ಕಡೆ ಪ್ರವಹಿಸುವ ಯತ್ನ ಮಾಡುವುದಿಲ್ಲ. ಈ ಕಾರಣದಿಂದ ಮನಶ್ಶಾಸ್ತ್ರ 'ವಾಸ್ತವಿಕ ಶಾಸ್ತ್ರ' ಎನ್ನಬಹುದು. ಈ ಶಾಸ್ತ್ರಗಳ ವ್ಯತ್ಯಾಸವನ್ನು ಸೂಕ್ಷ್ಮದರಲ್ಲಿ ಹೇಳುವ ಹಾಗಿ

ದ್ದರೆ ಹೀಗೆ ಹೇಳಬಹುದು : ಮನಶ್ಶಾಸ್ತ್ರವು ಆಲೋಚನೆ ಅಥವಾ ವಿಚಾರದ ಸ್ವಾಭಾವಿಕ ಗತಿಗಳಲ್ಲಿ ಆಸಕ್ತವಾಗಿದ್ದರೆ, ತರ್ಕ ಶಾಸ್ತ್ರವು ಅವುಗಳ ಫಲ ಅಥವಾ ಪರಿಣಾಮಗಳಲ್ಲಿ ಆಸಕ್ತಿಯನ್ನು ತೋರಿಸುತ್ತದೆ.[1]

ಇಷ್ಟು ವ್ಯತ್ಯಾಸವಿದ್ದರೂ ಕೂಡ ಈ ಶಾಸ್ತ್ರಗಳ ಪರಸ್ಪರ ಸಂಬಂಧವನ್ನು ಮರೆಯಬಾರದು. ಎರಡೂ ಮಾನಸಿಕ ಕ್ರಿಯೆಗಳಿಗೇ ಸಂಬಂಧಪಟ್ಟಿದ್ದರಿಂದ—ಮಾನಸಿಕ ಕ್ರಿಯೆ ಕೇವಲ ಕ್ರಿಯೆಯಾಗಿಯೇ ಉಳಿಯದೆ ಯಾವುದೋ ರೀತಿಯಲ್ಲಿ ಪರಿಸಮಾಪ್ತಿಹೊಂದುವುದರಿಂದ ಕ್ರಿಯೆ ಮತ್ತು ಗುರಿಗಳಿಗೆ ಪರಸ್ಪರ ಸಂಬಂಧವಿದ್ದೇ ಇರುತ್ತದೆ. ಕ್ರಿಯೆಯನ್ನು ಅರ್ಥಮಾಡಿಕೊಂಡರೆ, ಅದರ ಗತಿ ಹೇಗೆ ಹರಿಯುತ್ತಿದೆ ಎಂದು ಕಂಡುಬಂದು ಅದನ್ನು ತಿದ್ದಲೂ ನಮಗೆ ಸಾಧ್ಯವಾದೀತು. ಅಷ್ಟೇ ಅಲ್ಲದೆ ವಿಚಾರವನ್ನು ಯಾವುದೋ ಸ್ಥಿತಿಯಲ್ಲಿ ನಾವು ಕಂಡರೂ ಆ ಸ್ಥಿತಿಯು ಹೇಗೆ ಉತ್ಪನ್ನವಾಯಿತು ಎಂದು ವಿಶ್ಲೇಷಿಸಬಹುದು. ಹೇಗೆ ಮನಶ್ಶಾಸ್ತ್ರ ಮತ್ತು ತರ್ಕಶಾಸ್ತ್ರ ಕೂಡಿದರೆ ವಿಚಾರಕ್ಕೆ ಸಂಬಂಧಪಟ್ಟಂತಹ ಮಾನಸಿಕ ಪ್ರವೃತ್ತಿಯ ಅಧ್ಯಯನದಲ್ಲಿ ಪರಸ್ಪರ ಪೂರಕಗಳೆಂದೂ, ಸಂಸ್ಕೃತಿಯ ಸಾಧನೆಗೆ ಆವಶ್ಯಕವಾದ ವಿಜ್ಞಾನಭಾಗಗಳೆಂದೂ ಕಂಡುಬರುತ್ತವೆ.

## ತತ್ತ್ವಶಾಸ್ತ್ರ ಮತ್ತು ತರ್ಕಶಾಸ್ತ್ರ

ತತ್ತ್ವಶಾಸ್ತ್ರಕ್ಕೂ ತರ್ಕಶಾಸ್ತ್ರಕ್ಕೂ ಮೂಲಭೂತವಾದ ಸಂಬಂಧವಿದೆ. ತತ್ತ್ವಶಾಸ್ತ್ರವು ಎಲ್ಲ ಅನುಭವದ ವಿವೇಚನಾತ್ಮಕ ಅಧ್ಯಯನ. ಅನುಭವಕ್ಕೆ ಸಿಗುವ ಎಲ್ಲ ವಸ್ತುಗಳ 'ಅಸ್ತಿತ್ವ', 'ಅದರತನ' (ತತ್ + ತ್ವ) ಅದಕ್ಕೂ ಅದರ ಆವಿಷ್ಕಾರಗಳ ಸಂಬಂಧ ಮುಂತಾದ ಎಲ್ಲಾ ಮೂಲಗಳನ್ನು ಪ್ರಶ್ನಿಸುವ ಅಧ್ಯಯನ. ಮಿಕ್ಕೆಲ್ಲ ಶಾಸ್ತ್ರಗಳೂ ತಾವು ಆರಿಸಿಕೊಂಡ 'ವಸ್ತು'ವಿನ ವಿಚಾರದಲ್ಲಿ 'ಹೇಗೆ ?' ಎಂದು ವಿಚಾರಿಸಿದರೆ, ತತ್ತ್ವಶಾಸ್ತ್ರವು ಅದಕ್ಕೂ ಹಿನ್ನೆಲೆಯಾದ 'ಏಕೆ?' ಎನ್ನುವ ಪ್ರಶ್ನೆ ಕೇಳುತ್ತದೆ. ಎಂದರೆ ಸಾಧಾರಣವಾಗಿ ಎಲ್ಲ ಶಾಸ್ತ್ರಗಳೂ ತಮ್ಮ ಪಠ್ಯ ವಸ್ತುಗಳನ್ನು ಪ್ರಶ್ನೆಮಾಡದೆ ಅಂಗೀಕರಿಸಿದರೆ ತತ್ತ್ವಶಾಸ್ತ್ರವು ಅಂತಹ ಪೂರ್ವ ಕಲ್ಪಿತ ಅಥವಾ ಅಂಗೀಕೃತ ವಸ್ತುಗಳ ಅಸ್ತಿತ್ವವನ್ನೇ ಪ್ರಶ್ನಿಸುತ್ತದೆ. ಉದಾಹರಣೆಗೆ ಸತ್ಯ, ಧರ್ಮ, ಸುಂದರ ಎನ್ನುವ ಮೌಲ್ಯಗಳನ್ನು ಅಂಗೀಕರಿಸಿ ತರ್ಕಶಾಸ್ತ್ರ, ನೀತಿಶಾಸ್ತ್ರ, ಸೌಂದರ್ಯ ಶಾಸ್ತ್ರಗಳು ತಮ್ಮ ಅಧ್ಯಯನವನ್ನು

1. If Psychology is interested in the processes of thought, Logic is interested in the product of thought.

ಮುಂದುವರಿಸಿದರೆ ಈ ಮೌಲ್ಯಗಳನ್ನೇ ತತ್ತ್ವ ಶಾಸ್ತ್ರ ಪ್ರಶ್ನಿಸುತ್ತದೆ. ಹೀಗೆ ಪ್ರಶ್ನಿಸು ವುದರ ಪ್ರಭಾವ ಆಯಾ ಶಾಸ್ತ್ರಗಳ ಮೇಲೆ ಆಗದೆ ಇರುವುದಿಲ್ಲ. ಎಲ್ಲ ಶಾಸ್ತ್ರಗಳೂ ಇದರಿಂದ ಅರಿಯಬೇಕಾದುದೇನೆಂದರೆ ತಮ್ಮ ತಮ್ಮ ಕ್ಷೇತ್ರದಲ್ಲಿ ಪರಿಣತಿಯನ್ನು ಸಂಪಾದಿಸಿದರೂ ಜೀವನದ ಪೂರ್ಣ ಕ್ಷೇತ್ರಕ್ಕೆ ಅವುಗಳ ಸಂಬಂಧವನ್ನು ನೆನಪಿಗೆ ತಂದು ಕೊಳ್ಳಬೇಕು ಎನ್ನುವಂತಹುದು. ಅವುಗಳ ವಿಚಾರಪ್ರಾವಿಣ್ಯವೆಷ್ಟಿದ್ದರೂ ಸಮಸ್ತ ಜೀವನದಿಂದ ಪ್ರತ್ಯೇಕಿಸಲ್ಪಟ್ಟ ಜ್ಞಾನ ಸಾಧನೆಯ ದೃಷ್ಟಿಯಿಂದಲೇ ಅಲ್ಲದೆ ಪರಿಣಾಮದ ದೃಷ್ಟಿಯಿಂದಲೂ ಸೀಮಿತವಾಗುತ್ತವೆ. ಹೀಗೆ ತತ್ತ್ವಶಾಸ್ತ್ರವು ಎಲ್ಲದರ ತಳಹದಿಯನ್ನು ಪ್ರಶ್ನಿಸುವಂತೆ ಎಲ್ಲದರ ಸಂಬಂಧವನ್ನು ಗಮನದಲ್ಲಿಟ್ಟುಕೊಂಡು ಎಲ್ಲ ಶಾಸ್ತ್ರಗಳ ಸಮನ್ವಯವಾಗಿರುತ್ತದೆ. ತತ್ತ್ವದ ನೆರಳಿನಲ್ಲಿ ಖಂಡ ಜ್ಞಾನ ಅಥವಾ ಸಾಪೇಕ್ಷ ಜ್ಞಾನ ವಿಸ್ತಾರಗೊಂಡು ಅಖಂಡ ಅಥವಾ ಪೂರ್ಣತೆಯ ಕಡೆಗೆ ಗಮನ ಕೊಡುತ್ತವೆ. ಇದೇ ತತ್ತ್ವವು ಎಲ್ಲ ಶಾಸ್ತ್ರಗಳಿಗೂ ನೀಡುವ ದಿಗ್ದರ್ಶನ. ಈ ರೀತಿಯಿಂದ ನೋಡಿದರೆ ತರ್ಕವು 'ವಿಚಾರ' ಅಥವಾ 'ಚಿಂತನೆ' ಇವುಗಳನ್ನೇ ಪಠ್ಯವಸ್ತುವಾಗಿ ತೆಗೆದುಕೊಂಡಿರುವುದ ರಿಂದ, ತತ್ತ್ವಕ್ಕೆ ಒಂದು ಸಾಧನ ಸಲಕರಣೆಯನ್ನು ಒದಗಿಸುವುದೊಂದೇ ಅಲ್ಲದೆ, ಅದರ ಉದ್ದೇಶ ಸಾಧನೆಯಲ್ಲಿ ಮುಖ್ಯ ಅಂಗವಾಗಿಯೂ ಇರುತ್ತದೆ. ತರ್ಕಕ್ಕೂ ತತ್ತ್ವಕ್ಕೂ ಇರುವ ಈ ಸಂಬಂಧದಿಂದಲೇ ತನ್ನ ಧ್ಯೇಯವಾದ 'ಸತ್ಯ' ಎನ್ನುವುದನ್ನು ಚರ್ಚೆ ಮಾಡುವಾಗ ಅದು ಕೇವಲ ಚಿಂತನೆ ಅಥವಾ ವಿಚಾರದ ಕ್ಷೇತ್ರದಲ್ಲೆ ನಿಂತು ಕೇವಲ 'ನಿಯಮಾವಳಿ' ಗಳಲ್ಲೇ ನಿಲ್ಲದೆ (ಎಂದರೆ, ವಿಚಾರ ಅಥವಾ ಜ್ಞಾನದ ರೂಪಗಳು ಹೇಗಿದ್ದರೆ ದೋಷರಹಿತವಾಗಿರುತ್ತದೆ ಎಂದು ಹೇಳದೆ) ವಾಸ್ತವಿಕ ಪ್ರಪಂಚದ ದೃಷ್ಟಿ ಯಿಂದಲೂ ಆ ಚಿಂತನೆ ಎಷ್ಟು ಸಂಬಂಧಪಟ್ಟಿರಬೇಕು, ಎನ್ನುವುದನ್ನು ಗಮನಿಸಲು ಹೊರಟಿತು. ಎಂದರೆ ಸಾಂಪ್ರದಾಯಿಕ ಅಥವಾ ಅರಿಸ್ಟಾಟಲನ ತರ್ಕದ ನಿಲವಿನಿಂದ ಹೇಗೆ ತರ್ಕವು ಬದಲಾಗಿ ವಸ್ತು ಪ್ರಪಂಚ ಸತ್ಯವನ್ನೂ ಅಂಗೀಕರಿಸಿ ವಿಚಾರ ಸಮನ್ವಯವನ್ನು ಮಾಡಬೇಕಾಯಿತು ಎಂದು ತಿಳಿದು ಬರುತ್ತದೆ. ಜೆ. ಎಸ್. ಮಿಲ್ ಮುಂತಾದ ಆಧುನಿಕ ತರ್ಕಶಾಸ್ತ್ರಜ್ಞರು ತರ್ಕ ಶಾಸ್ತ್ರದ ಕ್ಷೇತ್ರವು ವಿಶಾಲವಾಗಿ ವಸ್ತು ಅಥವಾ ಭೌತವಿಜ್ಞಾನದ ದೃಷ್ಟಿಯನ್ನು ಬೆಳೆಸಿಕೊಂಡು ವಿಚಾರದ ರೂಪದೊಡನೆ 'ವಿಚಾರ್ಯವಾದ ವಸ್ತು' ವಿನ ಸಾಂಗತ್ಯವೂ ಸೇರಬೇಕೆನ್ನುವ ವಾದಕ್ಕೆ ತಳಹದಿ ಅವರ ವೈಜ್ಞಾನಿಕ ದೃಷ್ಟಿಯೊಂದೇ ಕಾರಣವಾಗಿರಲಿಲ್ಲ, ವಿಜ್ಞಾನದ ಬೆಳವಣಿಗೆಯೇ ಕಾರಣ ವಾಗಿರಲಿಲ್ಲ, ಅವೆಲ್ಲದಕ್ಕೂ ತಳಹದಿಯಾದ ತಾತ್ತ್ವಿಕ ದೃಷ್ಟಿಯೇ ಎನ್ನುವ ಸೂಕ್ಷ್ಮ ವನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಹೀಗೆ ತರ್ಕಶಾಸ್ತ್ರವು ಕೇವಲ ನಿಗಮನವಾಗಿರದೆ, ವಿಗಮನ ಆಗುವುದಕ್ಕೆ ತತ್ವದ ಪೂರ್ಣ ದೃಷ್ಟಿಯೇ ಕಾರಣವೆಂದರೆ ಅತಿಶಯೋಕ್ತಿಯಲ್ಲ.

ಇದುವರೆಗೂ ತರ್ಕಕ್ಕೂ ಇತರ ಹಲವು ಶಾಸ್ತ್ರಗಳಿಗೂ ಇರುವ ಸಂಬಂಧವನ್ನು

ಗಮನಿಸಿದೆವು. ಈಗ ತರ್ಕಶಾಸ್ತ್ರದ ಕ್ಷೇತ್ರವನ್ನು ನೇರವಾಗಿ ತೆಗೆದುಕೊಂಡು ಅದು ಪರಿಶೀಲಿಸುವ ವಿಚಾರಗಳನ್ನು ತಿಳಿಯೋಣ.

## ತರ್ಕಶಾಸ್ತ್ರದ ಕ್ಷೇತ್ರ ಮತ್ತು ಅದರ ವಿಸ್ತಾರ

ಪ್ರತಿಯೊಂದು ಶಾಸ್ತ್ರಕ್ಕೂ ಒಂದೊಂದು 'ಕ್ಷೇತ್ರ' ಇರುತ್ತದೆ. ಈ ಕ್ಷೇತ್ರವು ಯಾವುದಾದರೂ ನಿಯಮಿತ 'ವಸ್ತು' ಅಥವಾ 'ವಿಷಯ' ಕ್ಕೆ ಸಂಬಂಧಪಟ್ಟಹಾಗೆ ಇರುತ್ತದೆ ಮತ್ತು ಅದರ 'ವಿಸ್ತಾರ'ವನ್ನು ಸೂಚಿಸುತ್ತದೆ. ಉದಾಹರಣೆಗೆ ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ, ಗಣಿತಶಾಸ್ತ್ರ ಎನ್ನುತ್ತೇವೆ. ಅವು ಕ್ರಮವಾಗಿ ಜೀವಂತವಾದ ಪ್ರಾಣಿಗಳ, ಗಿಡ ಮರಗಳ, ಸಂಖ್ಯೆಯ ವಿಚಾರವಾದ ಅಧ್ಯಯನಗಳು. ಅವುಗಳ ಕ್ಷೇತ್ರ ವಿಸ್ತಾರವೆಂದರೆ ಆಯಾ ವಿಷಯಗಳಿಗೆ ಸಂಬಂಧಪಟ್ಟಹಾಗೆ ಬರುವ ಎಲ್ಲ ಅಂಶಗಳನ್ನೂ ಒಳಗೊಂಡಿರುತ್ತದೆ. ಹೀಗೆ ತರ್ಕಶಾಸ್ತ್ರವು ತನ್ನ ಅಧ್ಯಯನಕ್ಕೆ ಮಾನಸಿಕ ಕ್ಷೇತ್ರದಲ್ಲಿನ ಒಂದು ಅಂಶವಾದ 'ವಿಚಾರ', 'ಆಲೋಚನೆ' ಯನ್ನು ತೆಗೆದುಕೊಂಡು, ಅದಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನೂ ವಿಜ್ಞಾನ ದೃಷ್ಟಿಯಿಂದ ಪರಿಶೀಲಿಸುತ್ತದೆ. ತರ್ಕ ಶಾಸ್ತ್ರವು 'ವಿಚಾರ'ಕ್ಕೆ ಸಂಬಂಧಿಸಿದ ಯಾವ ಅಂಶಗಳನ್ನು ಪರಿಶೀಲಿಸುತ್ತದೆ ಎನ್ನು ವುದೇ ಅದರ ಕ್ಷೇತ್ರ ಪರಿಶೀಲನ. ಇಲ್ಲಿ ಆ ಅಂಶಗಳ ಹೆಸರನ್ನು ಸೂಚಿಸುತ್ತೇವೆ. ಅವುಗಳ ವಿವರಣೆಯೇ ಈ ಗ್ರಂಥದ ಉದ್ದೇಶ.

ವಿಚಾರಗಳು ಹೇಗಿದ್ದರೆ ಸತ್ಯವನ್ನು ವ್ಯಕ್ತಮಾಡಲು ಸಹಾಯಕವಾಗುತ್ತದೆ ಎನ್ನು ವುದೇ ತರ್ಕಶಾಸ್ತ್ರದ ದೃಷ್ಟಿ. ಇದನ್ನು ಗಮನದಲ್ಲಿಟ್ಟುಕೊಂಡು ತರ್ಕಶಾಸ್ತ್ರದ ಸ್ವಭಾವ ವನ್ನು ಅರಿತೆವಾದರೆ ಅದರ ಕ್ಷೇತ್ರವನ್ನು ವಿಶಾಲವಾಗಿ ಎರಡು ವಿಭಾಗಗಳಂತೆ ಕಾಣ ಬಹುದು.

1. ಮೊದಲನೆಯದು ವಿಚಾರದ ಸ್ಪಷ್ಟ ಮತ್ತು ನಿಯಮಾನ್ವಿತ ಅಭಿವ್ಯಕ್ತಿಗೆ ಸಂಬಂಧಪಟ್ಟದ್ದು. ಅಭಿವ್ಯಕ್ತಿ ಮಾಡುವ ವಸ್ತು ಅಥವಾ ಸಂಗತಿ ಏನೇ ಇರಲಿ, ನಮ್ಮ ಆಲೋಚನೆ ಯಾವ ನಿರ್ದಿಷ್ಟ ಗತಿ ಅಥವಾ ಮಾರ್ಗವನ್ನು ಅನುಸರಿಸಬೇಕು ಎನ್ನುವಂತ ಹದು, ಎಂದರೆ ಆಲೋಚನೆಯ 'ರೂಪ' ಅಥವಾ 'ಆಕಾರ'ಕ್ಕೆ ಸಂಬಂಧಿಸಿದುದು. ಇದನ್ನು ಸಾಂಪ್ರದಾಯಿಕವಾಗಿ Formal Logic (ರೂಪ-ಸಾಪೇಕ್ಷ ತರ್ಕ) ಅಥವಾ Deductive Logic (ನಿಗಮನ ತರ್ಕ) ಎನ್ನುತ್ತಾರೆ. ತರ್ಕಶಾಸ್ತ್ರದ ಅರ್ಧ ಕ್ಷೇತ್ರವನ್ನು ಈ ಅಂಶ ಆಕ್ರಮಿಸಿಕೊಳ್ಳುತ್ತದೆ.

ಮತ್ತೊಂದು, ಆಲೋಚನೆಯಲ್ಲಿ ಅಂತರ್ಗತವಾಗಿರುವ ವಸ್ತು, ವಿಷಯಕ್ಕೆ ಸಂಬಂಧಿಸಿದುದ್ದು. ಅದು ಕಾಲ್ಪನಿಕ ವಸ್ತುವಾಗಿರಬಹುದು, ಅಥವಾ ಬಾಹ್ಯ ಭೌತ ಪ್ರಪಂಚಕ್ಕೆ ಸೇರಿದಂತಹ ವಸ್ತುವಾಗಿರಬಹುದು. ಆಲೋಚನೆಯಲ್ಲಿ ರೂಪಕ್ಕಿಂತ ಈ

ವಸ್ತುವಿಗೆ ಪ್ರಾಶಸ್ತ್ಯಕೊಟ್ಟರೆ, ಆಲೋಚನೆಯನ್ನು ವಸ್ತುವಿನ ದೃಷ್ಟಿಯಿಂದ ನೋಡಿದಂತಾಗುತ್ತದೆ. ಇದಕ್ಕೆ Material Logic (ವಸ್ತು-ಸಾಪೇಕ್ಷ ತರ್ಕ) ಎನ್ನಬಹುದು. ಆಲೋಚನೆ ಅಥವಾ ವಿಚಾರ 'ವಸ್ತುಸಂವಾದಿ'ಯಾಗಿರುವುದರಿಂದ ಇದನ್ನು Inductive Logic (ವಿಗಮನ ತರ್ಕ) ಎಂದೂ ಕರೆಯುತ್ತಾರೆ.

ಆಲೋಚನೆ, ಚಿಂತನೆ, ವಿಚಾರಗಳಲ್ಲಿ 'ರೂಪ'ವೋ ಅಥವಾ 'ವಸ್ತು'ವೋ ಎನ್ನುವ ದೃಷ್ಟಿಯಿಂದ ತರ್ಕ Formal ಮತ್ತು Material ಎಂದು ವಿಭಾಗಿಸಲ್ಪಟ್ಟಿದೆ. ಒಂದು ಆಲೋಚನೆಯಿಂದ ಮತ್ತೊಂದು ಆಲೋಚನೆಗೆ ನಾವು ಹೋಗುವ ಕ್ರಮದಲ್ಲಿ ಎಂದರೆ 'ಅನುಮಾನ' (Inference) ಎನ್ನುವ ತರ್ಕ-ವಿಧಾನದ ದೃಷ್ಟಿಯಿಂದ ಈ ತರ್ಕಗಳು Deductive ಎಂದೋ, Inductive ಎಂದೋ ಎನಿಸಿಕೊಳ್ಳುತ್ತವೆ. Deductive ಅಥವಾ ನಿಗಮನ ತರ್ಕದಲ್ಲಿ ಗೃಹೀತವಾದದ್ದನ್ನೆಲ್ಲಾ ಸತ್ಯವೆಂದೇ ಭಾವಿಸಿ, ಅದರ ಸೀಮೆಯೊಳಗೇ ಇರುವಂತೆ ಮತ್ತೊಂದು ವಿಚಾರವನ್ನು ಊಹಿಸುತ್ತೇವೆ. ಇಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದದ್ದು ಗೃಹೀತ ವಾಕ್ಯ (Premise) ಎನ್ನುವುದರಿಂದ ಯಾವ ನಿಯಮವನ್ನು ಅನುಸರಿಸಿ ಮತ್ತೊಂದು ವಾಕ್ಯವನ್ನು ಅನುಮಿತಿ conclusion ಯಾಗಿ ಊಹಿಸುತ್ತೇವೆ ಎನ್ನುವುದೇ ಮುಖ್ಯ. ಇದಕ್ಕೆ 'ನಿಗಮನ ಅನುಮಾನ' ಎಂದು ಹೆಸರು. ಎಲ್ಲ ರೀತಿಯ 'ನಿಗಮನ ಅನುಮಾನ' (Deductive inference)ಗಳನ್ನು Deductive Logic ವಿಭಾಗದಲ್ಲಿ ಚರ್ಚಿಸುತ್ತೇವೆ.

ಹೀಗೆಯೇ 'ವಸ್ತುಸಂವಾದಿ'ಯಾದ ತರ್ಕದಲ್ಲಿ ನಮ್ಮ ಆಲೋಚನೆಗಳೆಲ್ಲಾ ವಸ್ತುವಿನ ವಿಚಾರದಲ್ಲಿ ಗಮನವಿಟ್ಟು, ಆಲೋಚನೆಗೆ ರೂಪವೊಂದೇ ಸಾಲದು, ಅದರಲ್ಲಿ ಬಾಹ್ಯ ಪ್ರಪಂಚದ ವಸ್ತುವೂ ಪ್ರತಿನಿಧೀಕರಿಸಬೇಕು ಎಂದು ಹೇಳುತ್ತದೆ. ಇಂತಹ ವಸ್ತುಸಂವಾದಿ ವಾಕ್ಯಗಳನ್ನು ಗೃಹೀತವಾಗಿಟ್ಟುಕೊಂಡು ಅದರಿಂದ ಮತ್ತೇನನ್ನು ಅನುಮಾನ ಕ್ರಮದಲ್ಲಿ ಊಹಿಸಬಹುದು ಎಂದು ವಿಚಾರಿಸುತ್ತದೆ. ಎಂದರೆ ಇಂತಹ ಅನುಮಾನದ ಲಕ್ಷಣ ಗೃಹೀತ ವಾಕ್ಯದ ಕ್ಷೇತ್ರ ಸಂಕುಚಿತವಾಗಿರುತ್ತವೆ. ಇದರಿಂದ ವಿಶಾಲಾರ್ಥವನ್ನು ಕೊಡುವ ಸಾಮಾನ್ಯ (universal) ಸಿದ್ಧಾಂತಗಳನ್ನು ಊಹಿಸುತ್ತೇವೆ. ಈ ಕ್ರಮಕ್ಕೆ 'ವಿಗಮನ ಅನುಮಾನ' (Inductive inference)ಎನ್ನುತ್ತೇವೆ. ಇದನ್ನು ವಿಗಮನ ತರ್ಕ (Inductive Logic) ಚರ್ಚಿಸುತ್ತದೆ.

2. ಎಲ್ಲ ವಿಚಾರ ಅಥವಾ ಆಲೋಚನೆಗಳನ್ನು ಭಾಷೆಯ ಮೂಲಕ ವ್ಯಕ್ತಪಡಿಸುತ್ತೇವೆ. ತರ್ಕವು ಹೇಳುವುದೇನೆಂದರೆ ಎಲ್ಲ ಅಭಿವ್ಯಕ್ತಿಯೂ ನಿಯಮಿತ ವಾಕ್ಯ-ರೂಪದಲ್ಲೇ ಇರಬೇಕೆಂದು. ಅಂತಹ ವಾಕ್ಯ'ತಾರ್ಕಿಕ ವಾಕ್ಯ'ವಲ್ಲದೆ, ಕೇವಲ ಸಾಮಾನ್ಯವಾಗಿ ನಾವು ಭಾಷಾರಚನೆ ಅಥವಾ ವ್ಯಾಕರಣ ನಿಯಮವನ್ನು ಅನುಸರಿಸಿದ ವಾಕ್ಯವಾಗಿರಬಾರದು ಎನ್ನುತ್ತಾರೆ. ಇಂತಹ 'ತಾರ್ಕಿಕ ವಾಕ್ಯ'ದ ರೂಪ, ಲಕ್ಷಣ,

ಅಂಗಗಳು, ಮುಂತಾದುವು ವಿಚಾರಣೀಯವಾದ ಅಂಶಗಳು.

ಒಂದು ತಾರ್ಕಿಕ-ವಾಕ್ಯ ಮನಸ್ಸಿನಲ್ಲೇ ನಿರ್ಣಯಿತವಾದ ವಿಚಾರದ ಒಂದು ರೂಪ. ಯಾವುದನ್ನು ಅಭಿವ್ಯಕ್ತ ಮಾಡುತ್ತೇವೋ, ಅದು ಮನಸ್ಸಿನಲ್ಲಿ ಮೊದಲೇ ಅನಭಿವ್ಯಕ್ತವಾಗಿ, ಆದರೆ ಪೂರ್ಣ ಸ್ವರೂಪದಲ್ಲಿ ಆಕಾರವನ್ನು ತಾಳಿರುತ್ತದೆ. ಅದನ್ನು 'ನಿರ್ಣಯ' ಅನ್ನುತ್ತೇವೆ.

ಈ 'ನಿರ್ಣಯ'ವನ್ನು ಮನಸ್ಸು ಮಾಡುವಾಗ ಅದು ಒಂದೋ ಅಥವಾ ಎರಡೋ ಅಂಶಗಳನ್ನು ಆಲೋಚಿಸಿ ನಿರ್ಣಯಕ್ಕೆ ಬಂದಿರುತ್ತದೆ. ನಿರ್ಣಯ-ರಚನೆಯಲ್ಲಿ ಹಲವು ಕಲ್ಪನೆಗಳು (concepts) ಸೇರಿರುತ್ತವೆ. ಅವುಗಳ ಸಂಬಂಧವನ್ನು ಭಾವಾತ್ಮಕವಾಗಿಯೋ ನಿಷೇಧಾತ್ಮಕವಾಗಿಯೋ ತರ್ಕಿಸುವುದೇ 'ನಿರ್ಣಯ'.

ತರ್ಕಶಾಸ್ತ್ರ 'ತಾರ್ಕಿಕ ವಾಕ್ಯ'ಗಳನ್ನು ವಿಚಾರಿಸುವಂತೆಯೇ, ಅದಕ್ಕೂ 'ನಿರ್ಣಯ'ಕ್ಕೂ ಇರುವ ಸಂಬಂಧ, ನಿರ್ಣಯಗಳಲ್ಲಿ ಅಡಗಿರುವ ವಿವಿಧರೀತಿಯ 'ಕಲ್ಪನೆ' ಇವುಗಳನ್ನು ಚರ್ಚಿಸಬೇಕು.

ಇಷ್ಟೇ ಅಲ್ಲ, ಒಂದು ತಾರ್ಕಿಕ ವಾಕ್ಯದ ಆಧಾರದ ಮೇಲೆ, ಎಂದರೆ ಅದರಲ್ಲಿ ವ್ಯಕ್ತವಾಗಿರುವ 'ವಿಚಾರ'ದ ಮೇಲೆ ಮತ್ತೊಂದು ವಿಚಾರವನ್ನು ಊಹಿಸುವ ಬಗೆಗೆ 'ಅನುಮಾನ'ವೆಂದು ಹೇಳಿದ್ದೇವೆ. ಅನುಮಾನವು ನಿಗಮನ ಮತ್ತು ವಿಗಮನವೆಂದು ಮೊದಲು ಸೂಚಿಸಿದ್ದೇವೆ. ನಿಗಮನ ಅನುಮಾನದಲ್ಲೂ ವಿವಿಧ ರೂಪಗಳಿವೆ. ನೇರ ಅಥವಾ ಪ್ರತ್ಯಕ್ಷ ಅನುಮಾನ (immediate inference), ಬಳಸು ಅಥವಾ ಮಾಧ್ಯಮಾನುವರ್ತ (mediate inference) ಇತ್ಯಾದಿ. ಅದರಲ್ಲೂ ಉಪಯೋಗಿಸುವ ತಾರ್ಕಿಕ ವಾಕ್ಯಗಳನ್ನನುಸರಿಸಿ ಮಾಧ್ಯಮಾನುವರ್ತ ಅನುಮಾನವು 'ಶುದ್ಧ' (Pure Syllogism) ಅಥವಾ 'ಮಿಶ್ರ' (Mixed Syllogism) ಆಗಿರುತ್ತದೆ.

ಹೀಗೆ ತರ್ಕಶಾಸ್ತ್ರದ ಕ್ಷೇತ್ರದಲ್ಲಿ ಬರುವ ಮುಖ್ಯ ಅಂಶಗಳು ಯಾವುವು ಎಂದು ತಿಳಿಸಿದ್ದೇವೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು, ರೂಪ-ಸಾಪೇಕ್ಷ ಮತ್ತು ವಸ್ತು-ಸಾಪೇಕ್ಷ ಅಥವಾ ನಿಗಮನ ಮತ್ತು ವಿಗಮನ ತರ್ಕ ವಿಭಾಗಗಳು ಬೇರೆಬೇರೆಯಲ್ಲ, ಅವು ಪರಸ್ಪರ ಪೂರಕಗಳು, ತರ್ಕದ ಪೂರ್ಣ ಸಮೀಕ್ಷೆಯಲ್ಲಿ ಅವು ಅನನ್ಯವಾದ ಅಂಶಗಳು, ಎಂಬುದು.

ತರ್ಕದ ಉದ್ದೇಶ ವಿಚಾರವು ನಿರ್ದುಷ್ಟ ಅಥವಾ ದೋಷರಹಿತವಾಗಿರಬೇಕು ಎನ್ನುವುದು. ನಿಯಮಗಳನ್ನು ಪಾಲಿಸದೆ ಆಲೋಚನಾಕ್ರಮ ಅಥವಾ ವಿಚಾರ ದೋಷಗಳನ್ನು ಗಳಿಸುತ್ತದೆ. ತರ್ಕದ ಗ್ರಂಥಗಳಲ್ಲಿ ತಾರ್ಕಿಕ ದೋಷಗಳ ವಿವರಣೆಯನ್ನು ಕೊಡುವುದು ಸ್ವಾಭಾವಿಕ. ಆದರೆ ತಾರ್ಕಿಕ ದೋಷಗಳು ತರ್ಕಶಾಸ್ತ್ರದ ಅಧ್ಯಯನ ಕ್ಷೇತ್ರದಲ್ಲಿ

ಅವಿಭಾಜ್ಯವಾದ ಅಂಗವಾಗಿ ಬರುವುದಿಲ್ಲ. ವಿಚಾರದ ನಿಯಮಗಳೇನೆಂದು ಹೇಳುವ ಪ್ರಸಂಗದಲ್ಲಿ ಅವುಗಳನ್ನು ಉಪೇಕ್ಷಿಸಿದರೆ ಆಗುವ ದೋಷಗಳೇನು ಎನ್ನುವುದನ್ನು ಪ್ರಾಸಂಗಿಕವಾಗಿ ಹೇಳುತ್ತಾರೆ. ಆದರೆ ವಿದ್ಯಾರ್ಥಿಯಾದವನು ಅದರ ಕಡೆಯೂ ಗಮನ ವನ್ನು ಇಟ್ಟಿರಬೇಕೆನ್ನುವುದು ಒಂದು ಉಚಿತ ಸೂಚನೆ.

## ತರ್ಕಶಾಸ್ತ್ರ ಮತ್ತು ಅದರ ಪ್ರಯೋಜನ

ತರ್ಕಶಾಸ್ತ್ರದ ಕ್ಷೇತ್ರಪರಿಚಯ ಮಾಡಿಕೊಂಡು, ಈ ಶಾಸ್ತ್ರವು 'ವಿಚಾರ'ಕ್ಕೆ ಸಂಬಂಧಿಸಿದ ಎಲ್ಲಾ ಅಂಶಗಳನ್ನೂ ಪರಿಶೀಲಿಸುತ್ತದೆ ಎಂದು ನಮಗೆ ಅರಿವುಂಟಾದರೂ, ಈ ಶಾಸ್ತ್ರದ ಅಧ್ಯಯನದಿಂದ ಏನು ಪ್ರಯೋಜನವಾಗುತ್ತದೆ ಎಂದು ಕೇಳಿದರೆ, ಅಂತಹ ಪ್ರಶ್ನೆಗೆ ಅರ್ಥವಿಲ್ಲವೆಂದೇ ಹೇಳಬೇಕು.

ಈ ಗ್ರಂಥದ ಸಾಮಾನ್ಯ ಪ್ರಸ್ತಾವನೆಯಲ್ಲಿ ಮತ್ತು ನಂತರವೂ ಸಂದರ್ಭೋಚಿತ ವಾಗಿ ಈ ಶಾಸ್ತ್ರದ ಸ್ವರೂಪ, ಲಕ್ಷಣ ಮತ್ತು ಅಗತ್ಯದ ವಿಚಾರವಾಗಿ ಹೇಳಿಯೇ ಇದ್ದೇವೆ. ಆದರೂ ಅವುಗಳನ್ನು ಸಂಕ್ಷಿಪ್ತರೀತಿಯಲ್ಲಿ ಇಲ್ಲಿ ಹೇಳುವ-ಪ್ರಯತ್ನಮಾಡೋಣ.

ತರ್ಕಶಾಸ್ತ್ರವು ಯಾವ ವಿಶಿಷ್ಟಗುಣದಿಂದ ಮಾನವನು ಮಾನವನೆನ್ನಿಸಿಕೊಳ್ಳು ತ್ತಾನೋ—ಎಂದರೆ ಆತನ ಬುದ್ಧಿ, ವಿಚಾರ, ಆಲೋಚನೆ ಇವುಗಳಿಂದ—ಅದನ್ನೇ ವೈಜ್ಞಾನಿಕವಾಗಿ ಅಧ್ಯಯನಮಾಡಿ, ಅದರ ಸ್ವರೂಪವನ್ನು ನಮಗೆ ತಿಳಿಸಿಕೊಡುತ್ತದೆ. ಎಂದರೆ, ಇಲ್ಲಿ ಗಮನಿಸಬಹುದಾದ ಒಂದು ವಿಶೇಷವಿದೆ. ತರ್ಕವು ನಮಗೆ ಆಲೋಚನೆ ಮಾಡುವುದನ್ನು ಕಲಿಸುವುದಿಲ್ಲ, ವಿಚಾರ ಮಾಡುವುದನ್ನು ಕಲಿಸುವುದಿಲ್ಲ. ಆದರೆ ಆಲೋಚನೆ, ವಿಚಾರಗಳು ಸರಿಯಾಗಿರಬೇಕಾದರೆ ಏನುಮಾಡಬೇಕು ಎಂದು ಹೇಳುತ್ತದೆ. ಈ ಮೊದಲೇ ಸೂಚಿಸಿರುವಂತೆ ಸಾಮಾನ್ಯ ಜ್ಞಾನ-ಚೈತನ್ಯವನ್ನು ಸ್ಫುಟಗೊಳಿಸಿ ಮೇಧಾಶಕ್ತಿಯನ್ನು ಊರ್ಜಿತಗೊಳಿಸಿ ವಿಚಾರಕ್ರಮವನ್ನು ನಿರ್ದುಷ್ಟವಾಗಿ ಅಥವಾ ದೋಷರಹಿತವಾಗಿ ಮಾಡುವ ಶಾಸ್ತ್ರ ತರ್ಕವಾಗಿದ್ದರೆ, ಅದರಿಂದ ಲಾಭವಲ್ಲವೇ ? ಅದರ ನೆರವಿನಿಂದ ಸಾಮಾನ್ಯಜ್ಞಾನ "ವಿಜ್ಞಾನ" ವಾಗುತ್ತದೆ. ದೋಷಪೂರ್ಣ ವಿಚಾರ 'ನಿರ್ದುಷ್ಟ' ವಾಗುತ್ತದೆ. ಅಸಂಬದ್ಧ ಆಲೋಚನೆ ಸುಸಂಬದ್ಧವಾಗುತ್ತದೆ.

ಇದರ ಫಲವಾಗಿ ಮಾನವನ ಇತರ ಅಧ್ಯಯನಗಳಿಗೂ ಸಹಾಯವಾಗುತ್ತದೆ. ಏಕೆಂದರೆ ಓರಣೆಯ ವಿಚಾರಕ್ರಮವೇ ಎಲ್ಲದಕ್ಕೆ ತಳಹದಿ. ಆದ್ದರಿಂದ ಎಲ್ಲ ವಿಜ್ಞಾನ ಗಳಿಗೂ ಬುನಾದಿಯಾಗಿ ತರ್ಕ ನಿಲ್ಲುತ್ತದೆ. ಅವುಗಳ ಗೃಹೀತ ಕಲ್ಪನೆಗಳನ್ನು ವಿಶ್ಲೇಷಿಸಿ, ಅವುಗಳ ಸಿದ್ಧಾಂತಗಳು ತರ್ಕಬದ್ಧವಿರುವ ಹಾಗೆ ಮಾಡುವುದರಲ್ಲಿ ಸಹಾಯಕ ವಾಗುತ್ತದೆ.

ತರ್ಕ ಶಾಸ್ತ್ರದ ಅಧ್ಯಯನದಿಂದ ಅಭ್ಯರ್ಥಿಗೆ ಆಗುವ ವೈಯಕ್ತಿಕ ಲಾಭವೆಂದರೆ,

ಅದು ಬೌದ್ಧಿಕ ಶಿಕ್ಷಣ, ಅಥವಾ ವ್ಯಾಯಾಮ (discipline). ಚಿಂತನೆಯ ಕ್ರಮ ಶುದ್ಧ, ಮತ್ತು ನಿರ್ದುಷ್ಟವಾಗುವುದಲ್ಲದೆ, ಪ್ರಯೋಗದಲ್ಲಿಯೂ ಕೂಡ ತರ್ಕಬದ್ಧ ವಿಚಾರ ಆತನದಾಗುತ್ತದೆ. ಅಲ್ಲದೆ ಇತರರಲ್ಲಿರಬಹುದಾದ ತಾರ್ಕಿಕ ದೋಷಗಳು ಕಂಡುಬಂದು ಪ್ರಸಂಗಾನುಸಾರ ವಾದದಲ್ಲೂ ಜಯ ಲಭಿಸುತ್ತದೆ. ಎಂದರೆ ಕಲಿತ ವಿಜ್ಞಾನ, ಪ್ರಾಯೋಗಿಕ ಕಲೆಯಾಗಿಯೂ ಶೋಭಿಸುತ್ತದೆ.

ಅಲ್ಲದೆ, ಬಹು ಮುಖ್ಯ ಲಾಭವೆಂದರೆ ಎಲ್ಲದಕ್ಕಿಂತ ಮೂಲಭೂತವಾದ ತತ್ತ್ವದ ಅಭ್ಯಾಸಕ್ಕೆ ತಳಹದಿಯಾಗುವಂತಹ ಅಧ್ಯಯನ ಈ ತರ್ಕಶಾಸ್ತ್ರ.

ಜೀವನಕ್ಕೆ ಅರ್ಥಕೊಟ್ಟು, ಅದನ್ನು ಸುವ್ಯವಸ್ಥಿತಗೊಳಿಸುವ ಅನೇಕ ಕಾರಣಗಳಲ್ಲಿ ಬುದ್ಧಿಯ ಶಿಕ್ಷಣ ಬಹಳ ಮುಖ್ಯವಾದ್ದರಿಂದ, ಆ ಶಿಕ್ಷಣವನ್ನು ನೀಡುವ ತರ್ಕದ ಅಧ್ಯಯನ ನಮಗೆ ಶ್ರೇಯಸ್ಕರವಲ್ಲವೇ ?

## ತರ್ಕಶಾಸ್ತ್ರದಲ್ಲಿ 'ರೂಪ' (Form) ಮತ್ತು 'ವಸ್ತು' (Matter) ಎಂದರೇನು?

ತರ್ಕಶಾಸ್ತ್ರವು ತನ್ನ ಅಧ್ಯಯನ ಕ್ಷೇತ್ರದಲ್ಲಿ 'ರೂಪ-ಸಾಪೇಕ್ಷ' ಮತ್ತು 'ವಸ್ತು-ಸಾಪೇಕ್ಷ' ಎನ್ನುವ ಅಂಶಗಳನ್ನು ಪರಿಶೀಲಿಸುತ್ತದೆ ಎಂದು ಈಗ ನೋಡಿದ್ದೇವೆ. ಈ 'ರೂಪ' ಮತ್ತು 'ವಸ್ತು' ಎನ್ನುವುದನ್ನು ಸಂಕ್ಷಿಪ್ತವಾಗಿ ನಾವು ತಿಳಿಯಬೇಕಾಗುತ್ತದೆ. ಏಕೆಂದರೆ ಇದನ್ನು ಅನುಸರಿಸಿಯೇ ತರ್ಕಶಾಸ್ತ್ರದ ಎರಡು ಮುಖ್ಯ ವಿಭಾಗಗಳಾಗಿವೆ.

'ರೂಪ'ವೆಂದರೆ ನಮ್ಮ ವಿಚಾರ ಅಥವಾ ಆಲೋಚನೆಯು ತಾಳುವ ಸ್ವಾಭಾವಿಕ ಆಕಾರ. ವ್ಯಾಕರಣದಲ್ಲಿರುವಂತೆ ಕೆಲವು ಸ್ಪಷ್ಟವಾಗಿ ಭಾವಾತ್ಮಕವಾಗಿರುತ್ತವೆ, ನಿಷೇಧಾತ್ಮಕವಾಗಿರುತ್ತವೆ, ಪ್ರಶ್ನೆಯ ರೂಪ ತಾಳಿರುತ್ತವೆ. ಆಶ್ಚರ್ಯವನ್ನು ವ್ಯಕ್ತಪಡಿಸುವ ರೂಪ ತಾಳಿರುತ್ತವೆ. ಹೀಗೆ ನಮ್ಮ ಅಭಿಪ್ರಾಯಗಳನ್ನು ವಿವಿಧ ರೂಪಗಳಲ್ಲಿ ವ್ಯಕ್ತ ಮಾಡುವುದರಿಂದ ಆಯಾ ವಾಕ್ಯಗಳು ಭಾವಾತ್ಮಕ, ನಿಷೇಧಾತ್ಮಕ, ಪ್ರಶ್ನಾತ್ಮಕ ಆಶ್ಚರ್ಯಸೂಚಕ ಎಂದು ವಿವಿಧ ಹೆಸರುಗಳನ್ನು ತಾಳುತ್ತವೆ. ಹೀಗೆಯೇ ತರ್ಕದಲ್ಲಿ ನಮ್ಮ ವಿಚಾರಗಳು ಯಾವ ಸ್ವಾಭಾವಿಕ ಗತಿಯನ್ನು ಅನುಸರಿಸುತ್ತವೆ ಎನ್ನುವುದನ್ನು ತಿಳಿದುಕೊಂಡು, ಅದರಲ್ಲಿ ಅಭಿಪ್ರಾಯವು ಖಚಿತವಾಗಿ ರೂಪಿತವಾಗಬೇಕಾದರೆ ಎಂತಹ ರೀತಿಯಲ್ಲಿ ಇರಬೇಕೆಂದು ನಿಶ್ಚಯಮಾಡುತ್ತಾರೆ. ವಿಚಾರಕ್ಕೆ ಒಂದು 'ರೂಪ' ಇದೆ ಎಂದು ಇಲ್ಲಿ ಭಾವನೆ. ಇದನ್ನು ಭೌತಿಕ ನಿದರ್ಶನದಿಂದ ತೋರಿಸಬಹುದು. ಉದಾಹರಣೆಗೆ ಮಡಕೆ. ಇದರ 'ರೂಪ' (ಆಕಾರ) ಬೇರೆ ಬೇರೆಯಾಗಿರಬಹುದು. ಇದರ 'ವಸ್ತು' ಮಣ್ಣು. ಯಾವುದರಿಂದ ಮಡಕೆಯನ್ನು ಮಾಡಿರುತ್ತೇವೋ ಅದೇ 'ವಸ್ತು'. ಇವುಗಳ ಅನ್ಯೋನ್ಯ ಸಂಬಂಧ ಹೇಗಿದೆಯೆಂದರೆ ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಹೀಗೆಂದೇ ತರ್ಕದಲ್ಲಿ

ವಿಚಾರಕ್ಕೆ ಒಂದು 'ರೂಪ'ವಿದೆ ಮತ್ತು 'ವಸ್ತು'ವಿದೆ ಎನ್ನುತ್ತೇವೆ. ಇವು ಅನ್ಯೋನ್ಯ. ಒಂದು ಹೂವನ್ನು ತೆಗೆದುಕೊಂಡು ಹೇಳುವುದಾದರೆ 'ಹೂವು' ಎನ್ನುವ ಭಾವನೆ ಅಥವಾ ಕಲ್ಪನೆಯೇ ವಸ್ತು. ಅದರ ವಿಚಾರವಾಗಿ ಅಭಿಪ್ರಾಯವನ್ನು-ಎಂದರೆ 'ನಿರ್ಣಯ' ಮಾಡಬೇಕಾದರೆ ಹೀಗೆ ಹೇಳಬಹುದು:

1. ಹೂವು ಕೆಂಪಗಿದೆ, ಅಥವಾ
2. ಹೂವು ಕೆಂಪಗಿಲ್ಲ

ಒಂದು ಭಾವಾತ್ಮಕವಾಗಿರುವುದರಿಂದ, ಅದನ್ನು ವ್ಯಕ್ತಪಡಿಸುವ ತಾರ್ಕಿಕ ವಾಕ್ಯ 'ಭಾವಾತ್ಮಕ' ವಾಗುತ್ತದೆ. ಎರಡನೆಯದು ಅಭಾವಾತ್ಮಕ ಅಥವಾ ನಿಷೇಧಾತ್ಮಕ ವಾಗಿರುವುದರಿಂದ ಅದನ್ನು ವ್ಯಕ್ತಪಡಿಸುವ ವಾಕ್ಯ 'ನಿಷೇಧಾತ್ಮಕ'ವಾಗುತ್ತದೆ. ಹೀಗೆ ಎರಡು ವಿಚಾರ ಅಥವಾ ಕಲ್ಪನೆಗಳು ಹೂವು ಮತ್ತು ಅದರ ಬಣ್ಣಗಳ—ಪರಸ್ಪರ ಸಂಬಂಧವನ್ನು ವ್ಯಕ್ತಪಡಿಸುವ ರೂಪಗಳು ಬೇರೆ ಬೇರೆ.

ಹಾಗೆಯೇ ಹಲವು ಸಂದರ್ಭಗಳಲ್ಲಿ ವಿಚಾರವನ್ನು ಅಭಿವ್ಯಕ್ತಮಾಡುವಾಗ ಸ್ಪಷ್ಟ ವಾಗಿ, ನೇರವಾಗಿ, ನಿಯಮರಹಿತವಾಗಿಯೂ ಹೇಳಬಹುದು. ಅಂತಹುದಕ್ಕೆ 'ನಿರಪೇಕ್ಷ ವಾಕ್ಯ (Categorical proposition) ಎನ್ನಬಹುದು ಅಥವಾ ನಿಯಮಗಳಿಗೆ ಒಳ ಪಟ್ಟಂತೆ ತಾತ್ಕಾಲಿಕವಾಗಿ, ಸಾಪೇಕ್ಷವಾಗಿಯೂ ಹೇಳಬಹುದು. ಇದಕ್ಕೆ 'ಸಾಪೇಕ್ಷ ವಾಕ್ಯ' (Hypothetical proposition) ಎನ್ನುತ್ತೇವೆ ಅಥವಾ ಒಂದು ವಿಚಾರವನ್ನು ದ್ವಂದ್ವಾರ್ಥದಲ್ಲಿ ಹೇಳಿ, ಆ ದ್ವಂದ್ವಗಳಲ್ಲಿ ಒಂದು ವಿಷಯವನ್ನು ಅನುಮೋದಿಸುತ್ತದೆ ಎನ್ನುವಂತೆ ವಾಕ್ಯ ಮಾಡಬಹುದು. ಇದಕ್ಕೆ 'ಪರ್ಯಾಯಾತ್ಮಕ' ಅಥವಾ 'ವೈಕಲ್ಪಿಕ ವಾಕ್ಯ' (Disjunctive proposition) ಎನ್ನುತ್ತೇವೆ. ಇವೆಲ್ಲವೂ ನಮ್ಮ ಮಾನಸಿಕ ಕ್ಷೇತ್ರದ 'ನಿರ್ಣಯ'ವನ್ನು ಶಬ್ದರೂಪದಲ್ಲಿ ಅಭಿವ್ಯಕ್ತ ಮಾಡುವಾಗ ನಮ್ಮ ವಿಚಾರ ತಾಳುವ ರೂಪಗಳು.

ಉದಾ : 1. ಎಲ್ಲ ಮಾನವರೂ ಮರ್ತ್ಯರು (ನಿರಪೇಕ್ಷ ವಾಕ್ಯ)
2. ಒಬ್ಬನು ಮಾನವನಾಗಿದ್ದರೆ, ಅವನು ಮರ್ತ್ಯ (ನಿಯಮಾತ್ಮಕ ವಾಕ್ಯ)
3. ಹೂವು ಕೆಂಪು ಅಥವಾ ಬಿಳುಪು (ಪರ್ಯಾಯಾತ್ಮಕ ವಾಕ್ಯ)

ಈ ಮೇಲಿನ ವಿವರಣೆಯಿಂದ ನಮಗೆ ತಿಳಿಯಬರುವುದೆಂದರೆ ನಮ್ಮ ಆಲೋಚನೆಗೆ ಸ್ವಾಭಾವಿಕವಾದ 'ರೂಪ'ವಿದೆ ಮತ್ತು ಆಲೋಚನೆಗೆ 'ವಸ್ತು'ವೂ ಇದೆ ಎಂದು.

## 'ಸತ್ಯ'ದ ರೂಪ (ಆಕಾರ) ಮತ್ತು 'ವಸ್ತು' (Formal truth and material truth)

ಈ ಮೇಲಿನ ರೀತಿಯಲ್ಲೇ ತರ್ಕಶಾಸ್ತ್ರದ ಗುರಿಯಾದ 'ಸತ್ಯ' ಎನ್ನುವುದಕ್ಕೂ ಒಂದು ರೂಪವಿದೆ, ಒಂದು ವಸ್ತುವಿದೆ. ಇದರ ಆಧಾರದ ಮೇಲೆ 'ರೂಪಕ್ಕೆ ಸಂಬಂಧಿಸಿದ ಸತ್ಯ' ಮತ್ತು ವಿಷಯ ಅಥವಾ ವಸ್ತುವಿಗೆ ಸಂಬಂಧಿಸಿದ ಸತ್ಯ' ಎಂದು ವಿಭಜಿಸಬಹುದು. ಸತ್ಯವೆಂದರೆ 'ಸಾಂಗತ್ಯ'. ಒಂದು ಬೌದ್ಧಿಕ ಪ್ರತ್ಯಯ ಅಥವಾ ಕಲ್ಪನೆಗೂ ಮತ್ತೊಂದು ಕಲ್ಪನೆಗೂ ಪರಸ್ಪರ ಸಾಂಗತ್ಯವಿದ್ದರೆ ಅದನ್ನು 'ರೂಪಸಾಂಗತ್ಯ' ಅಥವಾ 'ರೂಪಸತ್ಯ' ಎನ್ನುತ್ತೇವೆ. ಉದಾಹರಣೆಗೆ 'ಹಾಲು', 'ಬಿಳುಪು' ಎನ್ನುವ ಕಲ್ಪನೆಗಳು. ಇವು ಒಂದ ಕ್ಕೊಂದು ಸಂಬದ್ಧವಾದ್ದರಿಂದ, ಇವುಗಳ ಸಂಬಂಧ 'ರೂಪಸತ್ಯ'. ಎರಡು ಕಲ್ಪನೆಗಳು ಪರಸ್ಪರ 'ಅಸಂಬದ್ಧ' ಆಗಿದ್ದರೆ, ಅದನ್ನು 'ರೂಪ-ಅಸತ್ಯ' ಅಥವಾ 'ರೂಪ-ದೋಷ' ಅನ್ನುತ್ತೇವೆ. ಉದಾಹರಣೆಗೆ 'ಚಚ್ಚೌಕವಾದ ವೃತ್ತ.'

ಹೀಗೆಯೇ ವಸ್ತುವಿನ ವಿಚಾರದಲ್ಲೂ ಕೂಡ 'ವಸ್ತು ಸತ್ಯ' 'ವಸ್ತು ದೋಷ'ವಿದೆ. ವಸ್ತು ಸತ್ಯವೆಂದರೆ ಒಂದು ಕಲ್ಪನೆಗೂ, ಆ ಕಲ್ಪನೆ ಸೂಚಿಸುವ ವಿಷಯಕ್ಕೂ ಸಾಂಗತ್ಯ ವಿರುವಂತಹುದು. ಉದಾಹರಣೆ 'ಮಾನವನು ಮರ್ತ್ಯನು' (man is mortal). ಇಲ್ಲಿ 'ಮಾನವನು ಮರ್ತ್ಯನು' ಎನ್ನುವ ಕಲ್ಪನೆ ವಸ್ತುತಃ ಸರಿಯೆಂದು ಅನುಭವದಿಂದ ರೂಪು ಗೊಳ್ಳುವುದರಿಂದ ಅಂತಹ ಕಲ್ಪನೆ ಅಥವಾ ಯೋಚನೆಯಲ್ಲಿ 'ವಸ್ತುಸತ್ಯ' ಅಡಗಿದೆ. ಆದರೆ ಒಂದು ಕಲ್ಪನೆಗೂ ಮತ್ತು ಆ ಕಲ್ಪನೆಗೆ ಸಂಬಂಧಪಟ್ಟ ವಿಷಯಕ್ಕೂ ಸಾಂಗತ್ಯ ವಿಲ್ಲದಿದ್ದರೆ 'ವಸ್ತುದೋಷ' ಉಂಟಾಗುತ್ತದೆ. ಉದಾಹರಣೆಗೆ "ಬೆಂಕಿಯು ಸುಡುವುದಿಲ್ಲ", "ನೀರು ಬೆಟ್ಟದ ಮೇಲಕ್ಕೆ ಹರಿಯುತ್ತದೆ" ಇತ್ಯಾದಿ.

## 'ರೂಪ (ಆಕಾರ) ಸಾಪೇಕ್ಷ ತರ್ಕ' ಮತ್ತು 'ವಸ್ತು ಸಾಪೇಕ್ಷ ತರ್ಕ' (Formal Logic & Material Logic)

ಈ ಮೇಲಿನ ವಿವರಣೆಗಳಿಂದ ತರ್ಕಶಾಸ್ತ್ರವನ್ನೂ ಎರಡು ದೃಷ್ಟಿಯಿಂದ ನೋಡ ಬಹುದು. ನಮ್ಮ ಚಿಂತನೆಯು ನಿರ್ದುಷ್ಟವಾದ ನಿಯಮಿತ ವಿಚಾರ ಅಥವಾ ಆಲೋಚನಾ ರೂಪಗಳನ್ನು ಮಾತ್ರ ಅನುಸರಿಸಿದರೆ ಸಾಕು, ಆ ಆಲೋಚನೆಗಳಲ್ಲಿ ಪರಸ್ಪರ ಸಾಂಗತ್ಯ ವಿದ್ದರೆ ಸಾಕು ಎನ್ನುವ ತರ್ಕ ವಿಧಾನ Formal Logic ಎನಿಸಿಕೊಳ್ಳುತ್ತದೆ. ಇಲ್ಲಿ ನಮ್ಮ ಮನಸ್ಸು ಏನನ್ನು ಯೋಚಿಸುತ್ತದೆ ಎನ್ನುವುದು ಮುಖ್ಯವಲ್ಲ. **ಹೇಗೆ ಯೋಚಿಸು ತ್ತದೆ** ಎನ್ನುವುದೇ ಮುಖ್ಯ. ಇಲ್ಲಿ ವಿಷಯ ಮುಖ್ಯವಲ್ಲ, **ವಿಚಾರಗತಿ** ಮುಖ್ಯ. ನಾವು ಈಗಾಗಲೇ ನೋಡಿದಂತೆ ಕಲ್ಪನೆ, ನಿರ್ಣಯ ಮತ್ತು ಅನುಮಾನ ಇವು ನಿರ್ದುಷ್ಟವಾಗಿರ

ಬೇಕು. ಈ ಒಂದೊಂದಕ್ಕೂ ಒಂದು ನಿಯಮವಿದೆ. ಆ ನಿಯಮಗಳನ್ನು ಪಾಲಿಸುವ ಎಲ್ಲ ಜ್ಞಾನವೂ ಸತ್ಯವೇ ಎನ್ನುವಂತಹ ತರ್ಕದ ವಿಭಾಗಕ್ಕೆ 'ರೂಪ (ಆಕಾರ) ಸಾಪೇಕ್ಷ ತರ್ಕ' (Formal Logic) ಎನ್ನುತ್ತೇವೆ. ಈ ವಿಭಾಗವನ್ನು ಸಾಂಪ್ರದಾಯಿಕವಾದ ತರ್ಕ (Deductive Logic) ಎಂದು ಕರೆಯುತ್ತಾರೆ.

'ವಸ್ತು ಸಾಪೇಕ್ಷ ತರ್ಕ' ಎಂದರೆ ನಮ್ಮ ಆಲೋಚನೆಗಳು ಕೇವಲ ಮಾನಸಿಕ ಕ್ಷೇತ್ರದಲ್ಲೇ ನೆಲಸಿರುವ ಕಲ್ಪನೆಗಳಾಗಿರದೆ ವಸ್ತು ಅಥವಾ ವಿಷಯಗಳೊಡನೆ ಸಾಂಗತ್ಯ ವನ್ನು ಬಯಸುವುದು. ಮನಸ್ಸಿನ ಸ್ವಾಭಾವಿಕ ಗುಣವನ್ನು ಅನುಸರಿಸಿ ವಿಚಾರ ನಿಯಮ ಬದ್ಧವಾಗಿದ್ದರೆ ಸಾಲದು, ಬಾಹ್ಯ ಪ್ರಪಂಚದ ವಸ್ತುಗಳ ವಿಚಾರ ಸಾಂಗತ್ಯವನ್ನು, ರೂಪದೊಂದಿಗೆ ಸಮೀಕರಣ ಮಾಡಿಕೊಳ್ಳಬೇಕೆಂದು ಈ ತರ್ಕ ವಿಭಾಗ ಹೇಳು ತ್ತದೆ. 'ನಿರ್ಣಯ' ವಾಗಲೀ 'ಅನುಮಾನ'ವಾಗಲೀ ಅನುಭವ ಕ್ಷೇತ್ರದಲ್ಲಿಯೂ ಕೂಡ ಸಂಬದ್ಧತೆಯನ್ನು ಹೊಂದಿರಬೇಕು ಎನ್ನುವ ಈ ವಿಭಾಗವನ್ನು Material Logic ಅಥವಾ 'ವಸ್ತು ಲಕ್ಷಣ ತರ್ಕ'ವೆಂದು ಕರೆಯುತ್ತಾರೆ.

ಮೊದಲನೆಯದು 'ರೂಪ ಸತ್ಯ'ವನ್ನು ಪರಿಪಾಲಿಸಿದರೆ, ಎರಡನೆಯದು 'ವಸ್ತು ಸತ್ಯ'ವನ್ನು ಪರಿಪಾಲಿಸುತ್ತದೆ.

ಸತ್ಯದ ದೃಷ್ಟಿಯಿಂದ ನೋಡುವುದಾದರೆ ತರ್ಕ ಶಾಸ್ತ್ರವು ಈ ಎರಡೂ ಅಂಶ ಗಳನ್ನು ವಿಚಾರಿಸಲೇಬೇಕು. ಒಂದು ಮತ್ತೊಂದಕ್ಕೆ ಪೂರಕವಾಗಿರಬೇಕು. ಎರಡರ ಸಂಯೋಗದಿಂದ ಸತ್ಯಕ್ಕೆ ಪೂರ್ಣತೆ ಬರುತ್ತದೆ. ಆದ್ದರಿಂದ ಆಧುನಿಕ ತರ್ಕಶಾಸ್ತ್ರಜ್ಞರು ತರ್ಕವೆಂದರೆ ಅದು 'ರೂಪ (ಆಕಾರ) ತರ್ಕ'ವೂ ಹೌದು, 'ವಸ್ತು ತರ್ಕ'ವೂ ಹೌದು ಎಂದು ಸಮನ್ವಯ ದೃಷ್ಟಿಯಿಂದ ನೋಡುತ್ತಾರೆ.

## ಅಧ್ಯಾಯ 3

# ಪದ ಪ್ರಕರಣ (Doctrine of Terms)

### ಪದಗಳ ಉಪಯೋಗ

'ವಿಚಾರ' ಮಾಡಬೇಕಾದರೆ ಪದಗಳ ಉಪಯೋಗದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಅರ್ಥಗಳನ್ನು ತುಂಬುತ್ತೇವೆ ಎನ್ನುವುದನ್ನು ಗಮನಿಸಬೇಕು. ಪ್ರತಿಯೊಂದು ಪದವೂ ಅದನ್ನು ಬಳಸುವ ರೀತಿಯಲ್ಲಿ ಅರ್ಥವನ್ನು ಗಳಿಸುತ್ತದೆ ಎಂದರೆ ಒಂದೇ ಪದ ವಿವಿಧ ಅರ್ಥಗಳನ್ನು ನೀಡಬಲ್ಲದು. ಒಂದು ಪದ ಮತ್ತೊಂದನ್ನು ಸೂಚಿಸಬಹುದು. ನಿಕಟವರ್ತಿಯಾದ ಒಂದು ಸಾಪೇಕ್ಷಪದವನ್ನು ಸೂಚಿಸಬಹುದು, ಅದನ್ನು ನಿರಾಕರಿಸಬಹುದು. ಅದು ಕೇವಲ ಭಾವನೆಯನ್ನು ಸೂಚಿಸಬಹುದು ಅಥವಾ ಘನರೂಪದ ವಸ್ತುವನ್ನು ಸೂಚಿಸಬಹುದು. ಸಂಖ್ಯೆಯ ದೃಷ್ಟಿಯಿಂದ ಕೇವಲ ಒಂದನ್ನೇ ಸೂಚಿಸಬಹುದು ಅಥವಾ ಒಂದು ವರ್ಗ ಅಥವಾ ಗುಂಪನ್ನೇ ಸೂಚಿಸಬಹುದು. ಹೀಗೆ ಪದಗಳ ಅರ್ಥವನ್ನು ನಿರ್ಣಯಿಸದೆ, ಅವುಗಳ ಉಪಯೋಗದಲ್ಲಿ ಪರಿಣಾಮಕಾರಿಯಾಗಿ ಜಯಗಳಿಸಲು ಸಾಧ್ಯವಾಗುವುದಿಲ್ಲ. ತರ್ಕಶಾಸ್ತ್ರವು ವಿಚಾರವು ಸರಿಯಾದ ಮಾರ್ಗದಲ್ಲಿರಬೇಕಾದರೆ ಹೇಗೆ ಇರಬೇಕು ಎನ್ನುವ ಅಧ್ಯಯನವಾದ್ದರಿಂದ ಪ್ರಥಮತಃ ಪದಗಳ ವಿಶ್ಲೇಷಣೆ, ವರ್ಗೀಕರಣ ಇತ್ಯಾದಿಗಳನ್ನು ಮಾಡಲೇಬೇಕು.

### ಪದ, ಶಬ್ದ ಮತ್ತು ನಾಮ

'ವಿಚಾರ' ಎನ್ನುವುದನ್ನು ಆದಷ್ಟು ಸಂಕ್ಷಿಪ್ತ ರೀತಿಯಲ್ಲಿ ವ್ಯಕ್ತಮಾಡಬಲ್ಲ ಘಟಕ (unit ) ವೆಂದರೆ ಒಂದು ವಾಕ್ಯ. ಇದನ್ನು ತರ್ಕಶಾಸ್ತ್ರದಲ್ಲಿ 'ತಾರ್ಕಿಕ ವಾಕ್ಯ' ಎಂದು ಕರೆಯುತ್ತಾರೆ. ಇದಕ್ಕೂ ಸಾಮಾನ್ಯವಾಗಿ ಭಾಷಾಶಾಸ್ತ್ರ ಅಥವಾ ವ್ಯಾಕರಣವು ಹೇಳುವ ವಾಕ್ಯಕ್ಕೂ ವ್ಯತ್ಯಾಸವೇನೆಂಬುದನ್ನು ಮುಂದಿನ ಪ್ರಕರಣವೊಂದರಲ್ಲಿ ನೋಡುತ್ತೇವೆ. ಈಗ ತಾರ್ಕಿಕ ವಾಕ್ಯವೆನ್ನುವುದನ್ನು ಒಂದು ಘಟಕ ಎಂದು ತೆಗೆದುಕೊಂಡರೆ, ಅದರಲ್ಲಿ ಮಾನಸಿಕ ಕ್ರಿಯೆಯಾದ ಆಲೋಚನೆಗೆ ಪೂರ್ಣ ಅರ್ಥವನ್ನು ನೀಡುವಂತಹ ಎರಡು ಮುಖ್ಯ ಪದಗಳಿರುತ್ತವೆ. ಅವನ್ನು ಉದ್ದೇಶ್ಯ ಪದ ( Subject) ವಿಶೇಷಣ ಪದ (Predicate) ಎನ್ನಬಹುದು. ಯಾವುದರ ವಿಚಾರವಾಗಿ ವಾಕ್ಯವನ್ನು ಹೇಳಬಯಸುತ್ತೇವೋ ಅದು ಉದ್ದೇಶ್ಯ ಪದ. ಅದರ ವಿಚಾರವಾಗಿ ಏನನ್ನು ಹೇಳಬಯಸುತ್ತೇವೋ ಅದು ವಿಶೇಷಣ ಪದ. ಒಂದು ತಾರ್ಕಿಕ ವಾಕ್ಯದಲ್ಲಿ ಈ ಎರಡು ಪದಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹೇಳುವುದಿಲ್ಲ. ಅವು ಹೇಗೆ ಪರಸ್ಪರ ಸಂಬಂಧಪಟ್ಟಿರುತ್ತದೆ ಎನ್ನುವು

ದನ್ನು ಸೂಚಿಸಲು ಒಂದು ಕ್ರಿಯಾಪದದ ರೂಪವನ್ನು (some form of the verb 'to be') ಉಪಯೋಗಿಸುತ್ತೇವೆ. ಅದನ್ನು ತಾರ್ಕಿಕ ವಾಕ್ಯದಲ್ಲಿ 'ಸಂಯೋಗಿಕ ಪದ' (Copula) ಎನ್ನುತ್ತೇವೆ. ತಾರ್ಕಿಕ ವಾಕ್ಯದ ಸ್ವತಂತ್ರ ವಿವೇಚನೆಯನ್ನು ಮಾಡುವಾಗ ಇವುಗಳೆಲ್ಲದರ ವಿಚಾರ ಮಾಡಲಿದ್ದೇವೆ. ಈಗ ನಾವು ಗಮನಿಸಬೇಕಾದುದೇನೆಂದರೆ ಒಂದು ವಿಚಾರವನ್ನು ಅಭಿವ್ಯಕ್ತ ಮಾಡುವಾಗ ಎಂದರೆ ಮಾನಸಿಕ ಕ್ಷೇತ್ರದಲ್ಲಿ ಮಾಡಲ್ಪಟ್ಟ 'ನಿರ್ಣಯ' ಎನ್ನುವುದನ್ನು ಶಬ್ದರೂಪದ ತಾರ್ಕಿಕ ವಾಕ್ಯದಲ್ಲಿ ಹೇಳುವಾಗ ಕೆಲವು ಪೂರ್ಣಾರ್ಥಗಳನ್ನು ಕೊಡುವಂತಹ ಪದಗಳನ್ನು ಉಪಯೋಗಿಸುತ್ತೇವೆ, ಮತ್ತೆ ಕೆಲವು ಪದಗಳು ಆ ಶಕ್ತಿಯನ್ನು ಪಡೆದಿರುವುದಿಲ್ಲ. ಉದಾಹರಣೆಗೆ ಹೂವು, ಮಾನವ, ಕೆಂಪು, ಮರ್ತ್ಯ ಎನ್ನುವ ಪದಗಳು. ಇವುಗಳನ್ನು ಉದ್ದೇಶ್ಯಪದವಾಗಿಯೋ, ವಿಶೇಷಣಪದವಾಗಿಯೋ ಉಪಯೋಗಿಸಬಹುದು.

a. **ಹೂವು ಕೆಂಪ**ಗಿದೆ.

b. **ಮಾನವನು ಮರ್ತ್ಯ**ನಾಗಿದ್ದಾನೆ.

ಆದರೆ 'ಇದೆ', 'ಆಗಿದ್ದಾನೆ' ಎನ್ನುವ ಪದಗಳು ಸ್ವತಂತ್ರವಾಗಿ ಯಾವ ಅರ್ಥವನ್ನೂ ಕೊಡುವುದಿಲ್ಲ. ಹಾಗೆಯೇ ಮತ್ತೂ ಕೆಲವು ಪದಗಳಿವೆ. 'ಆ ಹೂವು' ಎನ್ನುವಲ್ಲಿ 'ಆ'; 'ಇದು ಮನೆ' ಎನ್ನುವಲ್ಲಿ 'ಇದು'; 'ಈ ಹೂವು ಚೆನ್ನ' ಎನ್ನುವಲ್ಲಿ 'ಈ' ಎನ್ನುವದು ಸಂಪೂರ್ಣ ಅರ್ಥ ಕೊಡುವುದಿಲ್ಲ. ಎಂದರೆ ಕ್ರಿಯಾಪದ (Verb) ಕ್ರಿಯಾ ವಿಶೇಷಣ ಪದ (Adverb), ಉಪಸರ್ಗ (Preposition), ಸಂಯುಕ್ತಪದ (Conjunction) ಇವೆಲ್ಲವೂ ಈ ಜಾತಿಯದು. ತರ್ಕದಲ್ಲಿ ಸಂಪೂರ್ಣಾರ್ಥವನ್ನು ಕೊಡುವ, ಸ್ವತಂತ್ರವಾಗಿ ಉದ್ದೇಶ್ಯಪದವಾಗಿಯೋ, ವಿಶೇಷಣಪದವಾಗಿಯೋ ನಿಲ್ಲಬಲ್ಲ ಪದಗಳಿಗೆ "ಪದ" (Term) ಎಂದು ಹೆಸರು. ಮಿಕ್ಕ ಪದಗಳಿಗೆ ಕೇವಲ "ಶಬ್ದ" (Word) ಎಂದು ಹೆಸರು. ಭಾಷೆ ಅಥವಾ ವ್ಯಾಕರಣಕ್ಕೆ ಎಲ್ಲವೂ ಪದಗಳೇ ಆದರೂ ತರ್ಕವು ಪಾರಿಭಾಷಿಕ ದೃಷ್ಟಿಯಿಂದ ಪದಗಳನ್ನು "ಪದ"ಗಳೆಂದೂ, "ಶಬ್ದ"ಗಳೆಂದೂ ವಿಭಜಿಸುತ್ತದೆ. "ಪದ"ಗಳನ್ನು ಇಂಗ್ಲೀಷಿನಲ್ಲಿ 'Term' ಅಥವಾ 'Categorematic word' ಎನ್ನುತ್ತಾರೆ. "ಶಬ್ದ"ವನ್ನು 'Word' ಅಥವಾ Syncategorematic word' ಎನ್ನುತ್ತಾರೆ. ಎಲ್ಲ ನಾಮಪದಗಳೂ (Nouns) "ಪದ"ಗಳಾಗುತ್ತವೆ. "ಶಬ್ದ"ಗಳೆನ್ನುವುದು ತಾರ್ಕಿಕ ವಾಕ್ಯರಚನೆಯಲ್ಲಿ ಸಂಬಂಧಗಳನ್ನು, ವಿವರಗಳನ್ನು ವ್ಯಕ್ತಪಡಿಸುವುದಕ್ಕೆ ಉಪಯೋಗಿಸುತ್ತೇವೆ. ಅವುಗಳು ಅರ್ಥದ ದೃಷ್ಟಿಯಿಂದ "ಪದ"ಗಳಿಗೆ ಅಧೀನವಾಗಿರುತ್ತವೆ.

ಪದಗಳ ವರ್ಗೀಕರಣಕ್ಕೆ ಹೋಗುವ ಮುನ್ನ ಇಲ್ಲಿ ಸಣ್ಣ ವಿಚಾರವನ್ನು ಗಮನಿಸಬೇಕು. ವಸ್ತುಗಳ, ಜೀವಿಗಳ 'ಹೆಸರು'ಗಳೆಲ್ಲ 'ನಾಮ'ಗಳು (Names). ಅವು ವ್ಯಕ್ತಿ

ಸೂಚಕವಾದ ಅಭಿಧಾನಗಳು. ಉದಾಹರಣೆಗೆ ರಾಮು, ಗೋವಿಂದ, ಮೈಸೂರು, ದೆಹಲಿ, ಇತ್ಯಾದಿ. ಇವು 'ಪದ'ಗಳು. ಎಲ್ಲ 'ನಾಮಪದ'ಗಳೂ 'ಪದ'ಗಳು ಆದರೆ ಎಲ್ಲ 'ಪದ'ಗಳೂ, 'ನಾಮಪದ'ಗಳಲ್ಲ ಎನ್ನುವುದನ್ನು ಗಮನದಲ್ಲಿಡಬೇಕು. ಏಕೆಂದರೆ ಪುಸ್ತಕ, ಕಾಡು, ಹಸು ಮುಂತಾದವು 'ಪದ'ಗಳಾದರೂ ವ್ಯಕ್ತಿಗಳ 'ಹೆಸರು'ಗಳಲ್ಲ.

'ಪದ' ಎಂದರೆ ಒಂದೇ ಅಕ್ಷರ (Letter)ದಿಂದ ಕೂಡಿರಬಹುದು ಅಥವಾ ಅನೇಕ ಅಕ್ಷರಗಳಿಂದ ಕೂಡಿರಬಹುದು. ಉದಾಹರಣೆಗೆ ಇಂಗ್ಲೀಷ್ ಭಾಷೆಯ 'ನಾನು' ಎನ್ನುವುದಕ್ಕೆ 'I' ಎನ್ನುವ ಶಬ್ದ ಇರುವಂತೆ, ವೆಲ್ಷ್ (Welsh) ಭಾಷೆಯಲ್ಲಿ ಐವತ್ತೆಂಟು ಅಕ್ಷರಗಳುಳ್ಳ ಒಂದು ಪದವಿವೆಯಂತೆ![1] ಅಥವಾ ಒಂದೇ ಶಬ್ದ (Word) ಹೊಂದಿರಬಹುದು. ಉದಾಹರಣೆಗೆ— ಕುರ್ಚಿ, ಮೇಜು ಇತ್ಯಾದಿ. ಅಥವಾ ಅನೇಕ ಶಬ್ದಗಳನ್ನು ಹೊಂದಿರಬಹುದು. ಉದಾ: ಭಾರತದ ಪ್ರಧಾನ ಮಂತ್ರಿ, ಅಮೆರಿಕದ ಸಂಯುಕ್ತ ರಾಷ್ಟ್ರಗಳ ಅಧ್ಯಕ್ಷ, ಇತ್ಯಾದಿ.

**ಪದಗಳ ವರ್ಗೀಕರಣ**

ಈಗ ತಾರ್ಕಿಕ ವಾಕ್ಯಗಳಲ್ಲಿ ಬಳಸಬಹುದಾದ 'ತಾರ್ಕಿಕ ಪದ' ಅಥವಾ 'ಪದ'ಗಳನ್ನು ಹೇಗೆ ವರ್ಗೀಕರಣ ಮಾಡಬಹುದೆಂದು ನೋಡೋಣ. ಸಾಮಾನ್ಯವಾಗಿ ಪದಗಳನ್ನು ಈ ಕೆಳಕಂಡಂತೆ ವರ್ಗೀಕರಣ ಮಾಡಬಹುದು.

a. ಸರಳ ಅಥವಾ ಸಂಕೀರ್ಣ (Simple or Complex)

b. ಏಕ ಅಥವಾ ಸಾಮಾನ್ಯ (Singular, General)

c. ವ್ಯಷ್ಟಿ ಅಥವಾ ಸಮಷ್ಟಿ (Distributive, Collective)

d. ಸ್ಥೂಲ (ಮೂರ್ತ) ಅಥವಾ ಮಾನಸಿಕ (ಅಮೂರ್ತ) (Concrete, Abstract)

e. ಭಾವಾತ್ಮಕ ಅಥವಾ ಅಭಾವಾತ್ಮಕ (ನಿಷೇಧಾತ್ಮಕ) ಮತ್ತು ತಾತ್ಕಾಲಿಕಾಭಾವ (Positive, negative or privative)

f. ನಿರಪೇಕ್ಷ ಅಥವಾ ಸಾಪೇಕ್ಷ (Absolute or relative)

---

1. "Llanfairpwllgwnglddgeogerychwwyrndrobwllllland Ysiliogogogoch"

ಇಂತಹ ದೊಡ್ಡ ಪದದ ಅರ್ಥ ಹೀಗಿದೆ: "the village of the church of St. Mary by the pool of the white hazels near the swift whirlpool of St. Tysilio's church of the red cave"— Quoted by D. L. Evans and others : Elements of Logic. p. 52.

g. ವಿರುದ್ಧ ಅಥವಾ ವ್ಯಾಘಾತಕ (Contrary or Contradictory)
h. ಸುಗುಣವಸ್ತುವಾಚಕ ಅಥವಾ ಅಗುಣ-ಅವಸ್ತುವಾಚಕ (Connotative or Non connotative)

ಇವುಗಳನ್ನು ಕ್ರಮವಾಗಿ ಪರಿಶೀಲಿಸೋಣ.

**a. ಸರಳ ಅಥವಾ ಸಂಕೀರ್ಣ ಪದಗಳು :**

ಒಂದು ತಾರ್ಕಿಕ ಪದದಲ್ಲಿ ಹಲವು ಸಲ ಒಂದೇ ಶಬ್ದವಿರಬಹುದು, ಮತ್ತೆ ಹಲವು ಸಲ ಒಂದಕ್ಕಿಂತ ಹೆಚ್ಚಿನ ಶಬ್ದಗಳಿರಬಹುದು. ಒಂದೇ ಶಬ್ದವಿರುವ ಅಥವಾ ಒಂದೇ ಶಬ್ದದಿಂದ ಆಗಿರುವ ತಾರ್ಕಿಕ ಪದಕ್ಕೆ **ಸರಳ ಪದ** ಎಂದು ಹೆಸರು. ಉದಾಹರಣೆ— ವಿದ್ಯಾರ್ಥಿ, ಕಾಲೇಜು, ಮೇಜು, ಮಾನವ ಇತ್ಯಾದಿ.

ಮೂರು ನಾಲ್ಕು ಶಬ್ದಗಳ ಸಮುದಾಯದಿಂದ ಒಂದು ತಾರ್ಕಿಕ ಪದವಾಗಿದ್ದರೆ, ಅದಕ್ಕೆ **ಸಂಕೀರ್ಣ ಪದ**ವೆಂದು ಹೆಸರು. ಉದಾಹರಣೆ : ಮೈಸೂರು ವಿಶ್ವವಿದ್ಯಾನಿಲಯ, ಸಮಿತಿಯ ಅಧ್ಯಕ್ಷ ಇತ್ಯಾದಿ.

**b. ಏಕ ಅಥವಾ ಸಾಮಾನ್ಯ**

ಮೊದಲನೆಯದು ಒಂದು ವ್ಯಕ್ತಿಗೆ, ಒಂದು ವಸ್ತುವಿಗೆ ಮಾತ್ರ ಅನ್ವಯವಾಗುತ್ತದೆ. ಉದಾ : ಮೈಸೂರು, ರಾಮು, ಕಾವೇರಿ, ಅತ್ಯಂತ ದೊಡ್ಡ ಶಿಖರ, ಈ ಪುಸ್ತಕ ಇತ್ಯಾದಿ. ಇದರಲ್ಲಿ ಹಲವು ಸಲ ಒಂದೆರಡು ಶಬ್ದಗಳಿಂದ ಒಂದು ತಾರ್ಕಿಕ ಪದವಾಗಿದ್ದರೂ, ಒಂದೇ ವಸ್ತುವಿಗೆ ಅಥವಾ ವ್ಯಕ್ತಿಗೆ ಅನ್ವಯುವಾಗುವುದರಿಂದ **ಏಕವಾಚಕ** ಪದವಾಗುತ್ತದೆ.

**ಸಾಮಾನ್ಯವಾಚಕ** ಪದವೆಂದರೆ ಅದನ್ನು ಒಂದೇ ಸಮಯದಲ್ಲಿ ಅನೇಕ ವಸ್ತುಗಳಿಗೆ ಅಥವಾ ವ್ಯಕ್ತಿಗಳಿಗೆ ಅನ್ವಯ ಮಾಡಬಹುದು. ಉದಾ : ಮಾನವ, ಪುಸ್ತಕ ವಿದ್ಯಾರ್ಥಿ, ವಾಹನ, ಮನೆ ಇತ್ಯಾದಿ.

ಈ ಏಕವಾಚಕ ಪದಗಳಲ್ಲಿ ಎರಡು ವಿಧವಿವೆ : **ವಿಶಿಷ್ಟ ಪೂರ್ಣ ಏಕವಾಚಕ** (Significant Singular), **ವಿಶಿಷ್ಟ ರಹಿತ ಏಕವಾಚಕ** (non-significant Singular). ಮೊದಲನೆಯದಕ್ಕೆ ಉದಾಹರಣೆ 'ಅತ್ಯಂತ ದೊಡ್ಡ ಶಿಖರ'. ಇಲ್ಲಿ ವಿಶೇಷವಾದ ಗುಣದ ಸೂಚನೆ ಇದ್ದು, ಅಂತಹ ಗುಣ ಕೇವಲ ಒಂದೇ ವಸ್ತುವಿನಲ್ಲಿ ಇರುವುದರಿಂದ ಏಕವಾಚಕವಾಗುತ್ತದೆ.

ಎಲ್ಲ ಅಂಕಿತನಾಮಗಳು (Proper Names) ಎರಡನೆಯದಕ್ಕೆ ಉದಾಹರಣೆಗಳು : ರಾಮು, ಗೋವಿಂದ, ಇಂಡಿಯಾ, ಹಿಮಾಲಯ ಇತ್ಯಾದಿ. ಇವು ಕೇವಲ ವ್ಯಕ್ತಿಗಳನ್ನು ಗುರುತಿಸಲು ನೀಡಿರುವ ಹೆಸರುಗಳು. ಅವು ಆ ವ್ಯಕ್ತಿಗಳ ಸ್ವಭಾವ ಅಥವಾ

ಗುಣಗಳನ್ನು ಸೂಚಿಸುವುದಿಲ್ಲ. ಆದ್ದರಿಂದ ಅವುಗಳನ್ನು ವಿಶಿಷ್ಟರಹಿತ ಏಕವಾಚಕ ಪದಗಳೆಂದು ಕರೆಯುತ್ತಾರೆ.

### c. ವ್ಯಷ್ಟಿ ಮತ್ತು ಸಮಷ್ಟಿ ಪದಗಳು

**ಸಮಷ್ಟಿ** ಪದವೆಂದರೆ ಒಂದೇ ತೆರನಾದ ಅನೇಕ **ವ್ಯಕ್ತಿ**ಗಳನ್ನು ಅಥವಾ ವಸ್ತುಗಳನ್ನು ಒಳಗೊಂಡಿರುವ ಗುಂಪನ್ನು ಸೂಚಿಸುತ್ತದೆ. ಇದು ಸಮುದಾಯ ಸೂಚಕ ಪದ. ಉದಾಹರಣೆ : ಸೈನ್ಯ, ನಾವೆ, ಪುಸ್ತಕ ಭಂಡಾರ, ಹಿಂಡು, ಗೊಂಚಲು ಇತ್ಯಾದಿ.

**ವ್ಯಷ್ಟಿ** ಪದವೆಂದರೆ ಒಂದೇ ವಸ್ತುವನ್ನು ಅಥವಾ ವ್ಯಕ್ತಿಯನ್ನು ಪ್ರತ್ಯೇಕವಾಗಿ ಸೂಚಿಸುವುದು. ಸೈನಿಕ, ಹಡಗು, ಪುಸ್ತಕ ಇತ್ಯಾದಿ.

### d. ಸ್ಥೂಲ (ಮೂರ್ತ) ಅಥವಾ ಮಾನಸಿಕ (ಅಮೂರ್ತ) ವಾಚಕ ಪದಗಳು

**ಸ್ಥೂಲ** ಅಥವಾ **ಮೂರ್ತವಾಚಕ**ವೆಂದರೆ ನನ್ನ ಇಂದ್ರಿಯ ಗ್ರಾಹ್ಯಕ್ಕೆ ಸಿಗುವಂತಹ ವಸ್ತುಗಳನ್ನು ಸೂಚಿಸುವಂತಹದು. ಉದಾ : ಪುಸ್ತಕ, ಹೂವು, ಮಾನವ, ಮನೆ ಇತ್ಯಾದಿ. ಆದರೆ ಇವುಗಳ 'ಭಾವ' (idea)ಗಳನ್ನು ಸೂಚಿಸುವಂತಹವು ಅಥವಾ ಅವುಗಳಿಂದ ಪ್ರತ್ಯೇಕವೆನ್ನಲಾಗುವ 'ಗುಣ'ಗಳನ್ನು (qualities) ಸೂಚಿಸುವಂತಹುವು, ಎಂದರೆ ಮಾನಸಿಕ ಪ್ರತ್ಯಯಗಳ ರೂಪದಲ್ಲಿ ಅರ್ಥವನ್ನು ನೀಡುವಂತಹವು, **ಅಮೂರ್ತ** ಅಥವಾ **ಮಾನಸಿಕ ವಾಚಕ** ಪದಗಳು. ಉದಾ : 'ಮಾನವತೆ', 'ಒಳ್ಳೆಯತನ', 'ಐಶ್ವರ್ಯ', 'ಕೋಮಲತೆ', 'ಸೌಂದರ್ಯ' ಇತ್ಯಾದಿ. ಇವಕ್ಕೆ 'ಮನೋರೂಪ'ಗಳು ಮಾತ್ರ ಇರುವುದಲ್ಲವೆ 'ಸ್ಥೂಲ'ವಾಗಿ ನಮಗೆ ಕಾಣುವಂತಹ ರೂಪಗಳು ಸಿಗುವುದಿಲ್ಲ.

ಇಲ್ಲಿ ಒಂದನ್ನು ಗಮನದಲ್ಲಿಟ್ಟುಕೊಳ್ಳಬೇಕು. ವಸ್ತುಗಳಲ್ಲಿ ಕಾಣುವ 'ಗುಣ'ಗಳು ಉದಾಹರಣೆ : ಈ ಕಾಗದದ 'ಬಿಳುಪು', ಒಂದು ಹೂವಿನ 'ಕೆಂಪು' ಇವುಗಳು **ಗುಣವಾಚಕ** (adjectives)ಗಳು. ಇವುಗಳನ್ನು ನಾವು ಕಾಣಬಹುದಾದ್ದರಿಂದ ಅವು 'ಸ್ಥೂಲ' (concrete) ಆಗುತ್ತವೆ. ಆದರೆ ಅವುಗಳ 'ಭಾವ' (idea) ಮಾತ್ರ ಮಾನಸಿಕವಾಗುತ್ತದೆ.

ಪಾಶ್ಚಾತ್ಯ ತಾತ್ವಿಕರು ಮತ್ತೊಂದು ಅರ್ಥದಲ್ಲಿ 'concrete' ಮತ್ತು 'abstract' ಎನ್ನುವ ಪದಗಳನ್ನು ಉಪಯೋಗಿಸುತ್ತಾರೆ. ಉದಾಹರಣೆಗೆ 'Concrete' ಎಂದರೆ 'ಪೂರ್ಣತ್ವ' (completeness), ವ್ಯವಸ್ಥೆ (system), ಸಮಷ್ಟಿ (totality) ಎನ್ನುವ

---

* ಉದಾ : ಹೆಗೆಲ್ ಎಂಬಾತನು 'Concrete Universal' ಎನ್ನುವುದೇ ಅತ್ಯಂತಿಕ ಸತ್ಯ ಎನ್ನುತ್ತಾನೆ. ಇದಕ್ಕೆ ವಿರುದ್ಧವಾದದ್ದು 'Abstract Universal'.

ಅರ್ಥದಲ್ಲೂ ಅಮೂರ್ತ ಎಂದರೆ ಒಂದು ವ್ಯಕ್ತಿ ಅಥವಾ ಅಂಶವನ್ನು ಅದರ ಸನ್ನಿವೇಶ ಅಥವಾ ಸಂದರ್ಭದಿಂದ ಬೇರ್ಪಡಿಸುವುದು. ಉದಾಹರಣೆಗೆ ಸಮಾಜದಿಂದ ಪ್ರತ್ಯೇಕವೆನಿಸುವ ರೀತಿಯಲ್ಲಿ ವ್ಯಕ್ತಿಯನ್ನು ಪರಿಗಣಿಸುವುದು. ಜೀವಿಯಿಂದ ಪ್ರತ್ಯೇಕವೆಂಬಂತೆ ಜೀವಾಣುವನ್ನು ಪರಿಗಣಿಸುವುದು ಹೀಗೆ. ಮೂರ್ತ ಎನ್ನುವಂತಹ ವರ್ಗೀಕರಣವು ನಿರಪೇಕ್ಷ ಚಿದ್ವಾದ (Absolute Idealism) ಎನ್ನುವ ತತ್ತ್ವದೃಷ್ಟಿಯಿಂದ ಬಂದದ್ದು. ಆ ದೃಷ್ಟಿಯ ಪ್ರಕಾರ ಆತ್ಯಂತಿಕ ಸತ್ಯವೆನ್ನುವುದು ಒಂದು ಪೂರ್ಣ ಘಟಕ ಅದರೊಳಗೆ ಅನೇಕಾಂಶಗಳು ಇರುತ್ತವೆ. ಅವುಗಳ ಸಂಬಂಧ ಅನ್ಯೋನ್ಯ, ದೇಹಕ್ಕೂ ಅದರ ಇತರ ಭಾಗಗಳಿಗೂ ಇರುವಂತೆ.

**e. ಭಾವಾತ್ಮಕ ಅಥವಾ ಅಭಾವಾತ್ಮಕ ಮತ್ತು ತಾತ್ಕಾಲಿಕಾಭಾವ ಪದಗಳು**

**ಭಾವಾತ್ಮಕ** ಪದವು ವಸ್ತುವಿನ, ಗುಣದ ಅಸ್ತಿತ್ವವನ್ನು ಸೂಚಿಸುತ್ತದೆ. ಉದಾಹರಣೆ—ಮಾನವ, ಮಾನವತೆ, ಸತ್ಯ, ಕೆಂಪು, ಪರ್ವತ, ಇತ್ಯಾದಿ.

ಆದರೆ **ಅಭಾವಾತ್ಮಕ** ಪದವು ವಸ್ತುವಿನ ಅಥವಾ ಗುಣದ 'ಅನಸ್ತಿತ್ವ' ಅಥವಾ 'ಇಲ್ಲದಿರುವಿಕೆ'ಯನ್ನು ಸೂಚಿಸುತ್ತದೆ. ಅ-ಸತ್ಯ (ಅಸತ್ಯ), ಅ-ಶಾಂತಿ (ಅಶಾಂತಿ) ಅ-ಮಾನವತೆ ಅಮಾನವತೆ ಇತ್ಯಾದಿ. ಸಾಧಾರಣವಾಗಿ ಇಂಗ್ಲಿಷ್ ಭಾಷೆಯಲ್ಲಿ ನಕಾರಾತ್ಮಕ ಚಿಹ್ನೆಯಾದ 'non' ಎನ್ನುವ ಪದ್ಯವನ್ನು ಉಪಯೋಗಿಸಿದರೆ ಅಭಾವದ ಭಾವ ಬರುತ್ತದೆ.

**ತಾತ್ಕಾಲಿಕಾಭಾವ** ಪದವೆಂದರೆ ಯಾವುದಾದರೂ ಒಂದು ವಸ್ತುವಿನಲ್ಲಿ ಸಾಮಾನ್ಯವಾಗಿ ನಾವು ಊಹಿಸಬಹುದಾದ ಗುಣ ಇಲ್ಲವಾಗಿ, ಅದಕ್ಕೆ ಬದಲಾಗಿ ಮತ್ತೊಂದು ಗುಣವಿರುವುದನ್ನು ಸೂಚಿಸುವುದು. ಎಂದರೆ ಆ ವಸ್ತುವಿನಲ್ಲಿ ನಾವು ಊಹಿಸಬಹುದಾದ ಗುಣಕ್ಕೆ ಸಹಜವಾಗಿಯೇ ಸ್ಥಾನವಿದೆ. ಅಂತಹುದು ಇಲ್ಲದೇ ಹೋಗುವುದು ತಾತ್ಕಾಲಿಕ. ಸಹಜಗುಣದ ಶಕ್ಯತೆಯನ್ನು ಹೊಂದಿದ್ದು ಅದನ್ನು ಕಳೆದುಕೊಂಡಿದ್ದರೆ ಅಂತಹುದು 'ತಾತ್ಕಾಲಿಕಾಭಾವ'. ಅದು ಸಾಮಾನ್ಯ ನಿಯಮಕ್ಕೆ ಅಪವಾದವೇ ಹೊರತು ವಸ್ತುವಿನ ಗುಣಕ್ಕೆ ಸಂಬಂಧಪಟ್ಟ ಸಾಮಾನ್ಯ ನಿಯಮವಲ್ಲ. ಉದಾಹರಣೆ-ಕುಂಟತನ, ಕುರುಡತನ, ಇತ್ಯಾದಿ.

**f. ನಿರಪೇಕ್ಷ ಅಥವಾ ಸಾಪೇಕ್ಷ ಪದಗಳು**

**ನಿರಪೇಕ್ಷ** ಪದವೆನ್ನುವುದು ಒಂದು ವಸ್ತುವನ್ನೋ ಗುಣವನ್ನೋ ಸೂಚಿಸಬಹುದು. ಅಂತಹ ವಸ್ತು ಅಥವಾ ಗುಣ ಸ್ವತಂತ್ರವಾಗಿ ಅಸ್ತಿತ್ವವನ್ನು ಹೊಂದಿದ್ದು, ಸ್ವತಂತ್ರ ಅರ್ಥವನ್ನು ಕೊಡುವಂತಿರುತ್ತವೆ. ಎಂದರೆ ಅವು ತಮ್ಮ ಅಸ್ತಿತ್ವಕ್ಕಾಗಲೀ

ಅರ್ಥಕ್ಕಾಗಲೀ ಬೇರೆಯ ವಸ್ತು ಮತ್ತು ಅರ್ಥಗಳ ಆಶ್ರಯ ಹೊಂದಿರುವುದಿಲ್ಲ. ಉದಾಹರಣೆ ಮಾನವ, ಪುಸ್ತಕ, ಬೆಟ್ಟ, ಹೂವು, ಇತ್ಯಾದಿ.

ಇದಕ್ಕೆ ವಿರುದ್ಧವಾದದ್ದು-'ಸಾಪೇಕ್ಷ'. ಎಂದರೆ ಅಸ್ತಿತ್ವಕ್ಕಾಗಲೀ ಅರ್ಥಕ್ಕಾಗಲೀ ಪರಾಶ್ರಯ ಹೊಂದಿರುವುದು. ಆ ಆಶ್ರಯ ತಪ್ಪಿದರೆ, ಅದಕ್ಕೆ ಪೂರ್ಣತ್ವವೇ ಇರುವುದಿಲ್ಲ. ಉದಾಹರಣೆ ತಂದೆ, ಹೆಂಡತಿ, ಅರಸು, ಶಿಷ್ಯ, ಕಾರಣ, ದಕ್ಷಿಣ, ಪಶ್ಚಿಮ, ಪೋಷಕ ಇತ್ಯಾದಿ.

## ೪. ವಿರುದ್ಧಾತ್ಮಕ ಅಥವಾ ವ್ಯಾಘಾತಕ ಪದಗಳು

ಒಂದೇ ವಸ್ತುವಿನಲ್ಲಿ ಪರಸ್ಪರ ಹೊಂದಿಕೆ ಇಲ್ಲದಂತಹ ಗುಣಗಳಿದ್ದರೆ ಅವುಗಳಿಗೆ 'ಅಸಂಗತ' ಎನ್ನುತ್ತೇವೆ. ಇವುಗಳಲ್ಲಿ ಹಲವು ಗುಣಗಳು, ಅಥವಾ ಗುಣಗಳಿಂದ ಸೂಚಿತವಾದ ಪದಗಳು ಒಂದೊಂದನ್ನು ನಿರಾಕರಿಸುವಂತಿದ್ದರೆ ಅದಕ್ಕೆ **ವ್ಯಾಘಾತಕ** ಪದಗಳೆಂದು ಹೆಸರು. ಅಷ್ಟೇ ಅಲ್ಲದೆ ಅವುಗಳ ಅನ್ಯೋನ್ಯ ನಿರಾಕರಣೆಯೆಂದರೆ ಅವೆರಡರ ನಿರಾಕರಣೆಯ ಮಧ್ಯೆ ಮೂರನೆಯ ಪರ್ಯಾಯ ಪದಕ್ಕೆ ಅವಕಾಶವೇ ಇರುವುದಿಲ್ಲ. ವಿಚಾರ ಕ್ಷೇತ್ರವನ್ನು ಅವು ಎರಡೇ ಪೂರ್ಣವಾಗಿ ವ್ಯಾಪಿಸಿರುತ್ತವೆ. ಉದಾಹರಣೆ :

ಕೆಂಪು — ಕೆಂಪು-ಅಲ್ಲದ್ದು
ಮಾನವ — ಮಾನವನಲ್ಲದ್ದು
ಬೆಟ್ಟ — ಬೆಟ್ಟವಲ್ಲದ್ದು
ಕುರ್ಚಿ — ಕುರ್ಚಿ ಅಲ್ಲದ್ದು ಇತ್ಯಾದಿ.

ಆದರೆ ಒಂದೇ ಕ್ಷೇತ್ರದಲ್ಲಿದ್ದುಕೊಂಡು ವಿಪರೀತ ವಿರೋಧವನ್ನು ವ್ಯಕ್ತಪಡಿಸುವಂತಹವು '**ವಿರುದ್ಧಾತ್ಮಕ**' ಪದಗಳು. ಎಂದರೆ ಅವು ಪರಸ್ಪರ ವಿರುದ್ಧವಾಗಿದ್ದಾಗಲೇ, ಆ ಕ್ಷೇತ್ರದಲ್ಲಿ ಇವಕ್ಕೆ ವಿರುದ್ಧವಾದ ಮತ್ತು ಇತರ ಗುಣ ಅಥವಾ ವಸ್ತುಗಳು ಪರ್ಯಾಯವಾಗಿ ಇರಬಹುದು. ಎಂದರೆ ಒಂದು ವಿಚಾರ ಕ್ಷೇತ್ರವನ್ನು ಪರಸ್ಪರ ಎರಡೇ ಪದಗಳು ಆಕ್ರಮಿಸಿಕೊಳ್ಳದಿದ್ದರೆ, ಅಂತಹವು ಕೇವಲ ವಿರೋಧಾತ್ಮಕವಾದವು. ಉದಾಹರಣೆ-ಕೆಂಪು-ಹಳದಿ, ಮಾನವ, ಆನೆ, ಕುರ್ಚಿ, ಮೇಜು. ಇತ್ಯಾದಿ. ಎಂದರೆ, 'ಬಣ್ಣ'ದ ವಿಚಾರ ಕ್ಷೇತ್ರದಲ್ಲಿ ಕೆಂಪು ಮತ್ತು ಹಳದಿ ಮಾತ್ರವೇ ಇರುವುದಿಲ್ಲ, ಮತ್ತೂ ಗುಣಗಳಿವೆ. ಹಾಗೆಯೇ 'ಪ್ರಾಣಿ'ಯ ವಿಚಾರ ಕ್ಷೇತ್ರದಲ್ಲಿ ಮಾನವ, ಆನೆಗಳು ಮಾತ್ರವೇ ಅಲ್ಲ, ಇತರ ಪ್ರಾಣಿಗಳೂ ಇರುತ್ತವೆ.

### ೧. ಸಗುಣ-ವಸ್ತು-ವಾಚಕ ಅಥವಾ ಅಗುಣ-ಅವಸ್ತು-ವಾಚಕಪದಗಳು

**ಸಗುಣ-ವಸ್ತು-ವಾಚಕಗಳೆಂದರೆ** ವಸ್ತುವನ್ನೂ ಗುಣವನ್ನು ತೋರಿಸುವಂತಹ ಪದಗಳು. ಎಂದರೆ ಏಕಕಾಲದಲ್ಲಿ **ವಿಶೇಷ್ಯ ವಿಶೇಷ**ಗಳನ್ನು ಸೂಚಿಸುವಂತಹವು. ವಿಶೇಷ್ಯ'ವೆನ್ನುವುದು ವಸ್ತು. ಆ ವಸ್ತುವಿನಲ್ಲಿರುವ ಗುಣವು 'ವಿಶೇಷ'. ಮೊದಲನೆಯದು ಸ್ಥೂಲ ಅಥವಾ ಸೂಕ್ಷ್ಮ ರೀತಿಯ ವಸ್ತುವನ್ನು ತೋರಿಸುತ್ತದೆ. ಇದನ್ನು ವಿಶೇಷ್ಯ ಎನ್ನುತ್ತಾರೆ. ಕುರ್ಚಿ ಎನ್ನುವ ಪದ ಹಲವು 'ವಸ್ತು'ವನ್ನು ಮಾತ್ರವಲ್ಲದೆ, ವಸ್ತುವಿನ ಸಂಖ್ಯೆಯನ್ನೂ ತೋರಿಸುತ್ತದೆ. ವಸ್ತುಗಳು ಕೇವಲ ವಸ್ತುಗಳಾಗಿರದೆ ಗುಣಗಳನ್ನೂ ಹೊಂದಿರುತ್ತವೆ. ಈ ಗುಣಗಳನ್ನ 'ವಿಶೇಷಣ'ಎಂದು ಕರೆಯುುತ್ತೇವೆ. ಯಾನ ಪದ ವಿಶೇಷ್ಯ' ಮತ್ತು 'ವಿಶೇಷಣ' ಎರಡನ್ನೂ ಸೂಚಿಸುತ್ತದೆಯೋ ಅಂತಹ ಪದಕ್ಕೆ connotative' 'ಸಗುಣ-ವಸ್ತು-ವಾಚಕಪದವೆಂದು' ಹೆಸರು.

ಹಲವು ಸಲ ಬಳಕೆಯಲ್ಲಿ ಒಂದು ಪದವು ವಿಶೇಷ್ಯ, ವಿಶೇಷಣಗಳಲ್ಲಿ **ಕೇವಲ ಒಂದನ್ನು** ಮಾತ್ರ ಸೂಚಿಸಬಹುದು, ಎರಡನ್ನೂ ಅಲ್ಲ. ಅಂತಹ ಪದಕ್ಕೆ **'ಅಗುಣ-ಅವಸ್ತು-ವಾಚಕ'** 'non—connotative' ಎನ್ನಬಹುದು.

ನಾವು ಬಳಸುವ ಭಾಷೆಯಲ್ಲಿ ಸಾಮಾನ್ಯವಾಗಿ ಬರುವ ಪದಗಳೆಲ್ಲಾ ಸಗುಣ-ವಸ್ತುವಾಚಕ ಪದಗಳು. ಏಕೆಂದರೆ ಯಾವ ವಸ್ತುವನ್ನು ಸೂಚಿಸಿದರೂ ಅದರ ಗುಣವನ್ನು ಕಾಣುತ್ತೇವೆ. ಉದಾ : ಮಾನವ, ಕಾಲೇಜು, ದೇಶ, ಮರ, ಹೂವು, ಕಲ್ಲು, ನದಿ. ಪರ್ವತ ಇತ್ಯಾದಿ. ಇವಕ್ಕೆ 'ಅಪವಾದ'ಗಳಂತಿದ್ದು, **ಕೇವಲ** 'ಗುಣ'ವನ್ನೋ **ಕೇವಲ** 'ವಸ್ತು'ವನ್ನೋ ಸೂಚಿಸುವಂತಿದ್ದರೆ ಅದು **'ಅಗುಣ-ಅವಸ್ತು-ವಾಚಕ'** ವಾಗುತ್ತದೆ. ಕೇವಲ ಗುಣ ಅಥವಾ ಭಾವವನ್ನೇ ಸೂಚಿಸುವ ಪದಗಳು ವಿರಳ. ಆದರೂ ಏಕ-ಅಮೂರ್ತ **ವಾಚಕ** ಪದಗಳು ಇಂತಹವು. ಉದಾಹರಣೆ 'ಚಚ್ಚೌಕತೆ', 'ನ್ಯಾಯ' ಸತ್ಯತೆ' ಇಂತಹವು, ಕೇವಲ ವಸ್ತುವನ್ನೇ ಸೂಚಿಸುವ ಪದಗಳು **ಅಂಕಿತನಾಮ ಪದಗಳು** ಎಲ್ಲ ಅಂಕಿತ ನಾಮಗಳು ಆಯಾ ವಸ್ತುಗಳನ್ನು ಸೂಚಿಸುವುದಕ್ಕಾಗಿ' ಇತರ ವಸ್ತುಗಳಿಂದ ಪ್ರತ್ಯೇಕಿಸಿ ಗುರುತಿಸುವುದಕ್ಕಾಗಿ ಇಟ್ಟಿರುತ್ತೇವೆ. ಉದಾ. ರಾಮು, ಗೋವಿಂದ, ಭೀಮು, ಸುಂದರಿ, ಕಮಲ, ಹನುಮ ಇತ್ಯಾದಿ. ಈ ನಾಮಧೇಯಗಳಿಗೂ ಈ ನಾಮಗಳನ್ನು ಹೊಂದಿರುವ ಮನುಷ್ಯರಿಗೂ ಯಾವ ಗುಣ-ಸಂಬಂಧವಿರುವುದಿಲ್ಲ. ಎಂದರೆ ಗುಣಗಳನ್ನು ತೋರಿಸುವ ಉದ್ದೇಶದಿಂದ ಅಂಕಿತನಾಮಗಳನ್ನು ಕೊಟ್ಟಿರುವುದಿಲ್ಲ-ಅವು ಕೇವಲ ವಸ್ತುವಾಚಕಗಳು ಆದ್ದರಿಂದ ಅಂತಹವನ್ನು ಅಗಣ-ಅವಸ್ತು-ವಾಚಕ **ಎನ್ನುತ್ತಾರೆ.**

ಹೀಗೆ ಪದಗಳನ್ನು **ಎಂಟು** ರೀತಿಯಲ್ಲಿ ವರ್ಗ ಮಾಡಬಹುದು. ಅರ್ಥವನ್ನು

ವ್ಯಕ್ತಮಾಡುವಾಗ ಅದರಲ್ಲಿ ಸ್ಪಷ್ಟತೆ ಇರಬೇಕಾದದ್ದು ತರ್ಕದ ಉದ್ದೇಶವಾಗುವುದರಿಂ ಅವುಗಳ ಬಳಕೆಯ ವಿಚಾರದಲ್ಲಿ ವಿದ್ಯಾರ್ಥಿಯು ಹೆಚ್ಚಿನ ಜಾಗರೂಕತೆಯನ ಹೊಂದಿರಬೇಕು.

**ಹೆಚ್ಚಿನ ಅಧ್ಯಯನ**—ವಿಶೇಷ್ಯ ಮತ್ತು ವಿಶೇಷಣಗಳ ಸಂಬಂಧ.

ವಿಶೇಷ್ಯವನ್ನೂ ಮತ್ತು ವಿಶೇಷಣಗಳು ಏನೆನ್ನುವುದನ್ನೂ ನಾವು ಅರಿತಿದ್ದೇವೆ. ಇ ಗಳು ವಸ್ತು ಮತ್ತು ಗುಣಗಳನ್ನು ಸೂಚಿಸುವ ಪದಗಳೆಂಬುದನ್ನು ನೋಡಿದ್ದೇವೆ. ಇವುಗ ಮಧ್ಯೆ ಮತ್ತೊಂದು ಗಮನೀಯವಾದ ಸಂಬಂಧವಿರುವುದನ್ನು ಈಗ ನೋಡೋಣ.

ವಿಶೇಷ್ಯ ವಸ್ತುಗಳು ಗುಣಗಳನ್ನು ಹೊಂದಿರುವುದೇನೋ ನಿಜ. ಈ ಗುಣಗ ಬಹು ಸಾಮಾನ್ಯವಾದದ್ದಾದರೆ, ಅಂತಹ ಸಾಮಾನ್ಯ ಗುಣಗಳನ್ನುಳ್ಳ ವಸ್ತುಗಳ **ಸಂ** ಅಷ್ಟೇ ಹೆಚ್ಚಾಗಿರುತ್ತದೆ. ಉದಾಹರಣೆಗೆ 'ಮಾನವನು ಬುದ್ಧಿಜೀವಿ' ಎನ್ನುತ್ತೇವೆ. ಎಂ 'ಮಾನವ' ಮತ್ತು 'ಬುದ್ಧಿಜೀವಿ' ಎಂಬುದರಿಂದ ಸೂಚಿತವಾಗುವ ವಸ್ತುಗಳ ಸಂ ಸಮಾನವಾಗಿರುತ್ತದೆ. ಎಂದರೆ ಸಾಮಾನ್ಯವಾಗಿ ಎಷ್ಟು ಸಂಖ್ಯೆಯಲ್ಲಿ 'ಮಾನವರ ಇರುತ್ತಾರೋ, ಅಷ್ಟೇ ಸಂಖ್ಯೆಯಲ್ಲಿ 'ಬುದ್ಧಿಜೀವಿಗಳು' ಇರುತ್ತಾರೆ ಎಂದ ಹಾಗಾಯ್ತು ಆದರೆ ಈ ವಿಶೇಷ್ಯ ಅಥವಾ ವಿಶೇಷಣಗಳಲ್ಲಿ ಮತ್ತೂ ವಿಶಿಷ್ಟತೆ ಕಾಣಬೇಕಾದ ಪದಗಳು ಸೂಚಿಸುವಂತಹ ಸಂಖ್ಯೆಯಲ್ಲಿ ವ್ಯತ್ಯಾಸವಾಗಬೇಕು. ಉದಾಹರಣೆಗೆ "ಮಾನ ರಲ್ಲಿ ಉಪಾಧ್ಯಾಯ ವೃತ್ತಿಯನ್ನು ಅವಲಂಬಿಸಿದ ಬುದ್ಧಿಜೀವಿಗಳು" ಎಂದರೆ ಅಂತ ವಿಶೇಷ್ಯ ವಸ್ತುಗಳು ಸಂಖ್ಯೆಯಲ್ಲಿ ಕಡಿಮೆ ಆಗುವುದು. ಅದರಲ್ಲೂ ಮತ್ತೂ ವಿಶೇಷ ಹುಡುಕಿದೆವಾದರೆ, ಎಂದರೆ 'ಮಾನವರಲ್ಲಿ ಉಪಾಧ್ಯಾಯ ವೃತ್ತಿಯನ್ನು ಅವಲಂಬಿ ಭಾರತೀಯ ಬುದ್ಧಿಜೀವಿಗಳು' ಎನ್ನುವಲ್ಲಿ ಸಂಖ್ಯೆ ಮತ್ತೂ ಕಡಿಮೆಯಾಗುತ್ತದೆ. ಹಿ ವಿಶೇಷಣ ಅಥವಾ ಗುಣ ಹೆಚ್ಚಿದಷ್ಟೂ ವಿಶೇಷ್ಯ ವಸ್ತುಗಳ ವ್ಯಾಪ್ತಿ ಅಥವಾ ಸಂ ಕಡಿಮೆ ಆಗುತ್ತದೆ.

ಇದಕ್ಕೆ ಪ್ರತಿಯಾಗಿ ವಿಶೇಷಣ ಅಥವಾ ಗುಣ ಕಡಿಮೆ ಆದಷ್ಟೂ, ವಿಶೇ ವಸ್ತುಗಳ ಸಂಖ್ಯೆ ಹೆಚ್ಚಾಗುತ್ತದೆ.

ವಿಶೇಷಣ ಎಂದರೆ ಆಂತರಿಕ ಗುಣಗಳು. ಇದನ್ನು 'ಅಂತರಿಕತೆ' ಎನ್ನುತ್ತಾ ವಿಶೇಷ್ಯ ಎಂದರೆ ಬಾಹ್ಯ ವ್ಯಾಪ್ತಿ. ಇದನ್ನು 'ವಿಸ್ತಾರ' ಅಥವಾ 'ವ್ಯಾಪ್ತಿ' ಎನ್ನುತ್ತಾ ಇವುಗಳ ಅರ್ಥವನ್ನು ಗ್ರಹಿಸಿದರೆ ಅವುಗಳು ಪರಸ್ಪರ ಎಂತಹ ಸಂಬಂಧಗಳನ್ನು ಹೊಂದಿ ತ್ತವೆ ಎನ್ನುವುದನ್ನು ಗಮನಿಸಬಹುದು.

i. ವಿಶೇಷಣ ಹೆಚ್ಚಾದಷ್ಟೂ ವಿಶೇಷ್ಯ ಕಡಿಮೆಯಾಗುತ್ತದೆ.

ii. ವಿಶೇಷಣ ಕಡಿಮೆಯಾದಷ್ಟೂ ವಿಶೇಷ್ಯ ಹೆಚ್ಚಾಗುತ್ತದೆ. ಹೀಗೆಯೇ,

iii. ವಿಶೇಷ್ಯ ಹೆಚ್ಚಾದಷ್ಟೂ ವಿಶೇಷಣ ಕಡಿಮೆಯಾಗುತ್ತದೆ. ಮತ್ತು

iv. ವಿಶೇಷ್ಯ ಕಡಿಮೆಯಾದಷ್ಟು ವಿಶೇಷಣ ಹೆಚ್ಚಾಗುತ್ತದೆ.

ಇದನ್ನು ವಿಶೇಷ್ಯ-ವಿಶೇಷಣಗಳ "ಅನುಲೋಮ ಪ್ರತಿಲೋಮ-ಪ್ರಮಾಣ" ಸಂಬಂಧ ಎನ್ನುತ್ತಾರೆ.

## ಅಧ್ಯಾಯ 4

# ನಿರೂಪಣಾ ಮತ್ತು ವಿಭಜನ ಪ್ರಕರಣ

# Logical Definition and Division

## A. ನಿರೂಪಣೆಯ ಆವಶ್ಯಕತೆ ಮತ್ತು ಅಭಿಧೇಯಗಳು

ಔಪಚಾರಿಕ ಅಥವಾ ಅನೌಪಚಾರಿಕ ಶಿಕ್ಷಣ ಕ್ರಮಗಳಲ್ಲಿ ಶಬ್ದ ಮತ್ತು ಅ ಸಂಪತ್ತನ್ನು ಬೆಳೆಸಿಕೊಳ್ಳುವ ಅಗತ್ಯ ಬಹಳವಿರುತ್ತದೆ. ಅನೇಕ ಸಲ ವಿಜ್ಞಾನಗಳ ಸಂ ಹೆಚ್ಚಿದಂತೆಲ್ಲಾ, ಜ್ಞಾನದ-ಕ್ಷೇತ್ರ ವಿಸ್ತಾರಗೊಂಡಂತೆಲ್ಲಾ ನೂತನ ವಿಷಯಗಳ ಮ ಸ್ವಾವ್ಯ ಹೆಚ್ಚಾಗುತ್ತಿರುವಂತೆಲ್ಲಾ ನಮ್ಮ ಅರಿವಿನ ಮಟ್ಟವನ್ನು ಹೆಚ್ಚಿಸಿಕೊಳ್ಳಬೇಕಾ ಪ್ರಸಂಗ ದಿನವೂ ಹೆಚ್ಚುತ್ತದೆ. ಅನೇಕ ಸಾಮಾನ್ಯ ಪದಗಳು ವಿಶಿಷ್ಟ ಅರ್ಥವನ್ನು ಗಳಿಸಿ ತ್ತವೆ ಅಥವಾ ವಿಶಿಷ್ಟ ಅರ್ಥವನ್ನು ಕೊಡುವ ನೂತನ ಪದಗಳು ಸೃಷ್ಟಿಯಾಗಿರುತ್ತ ಪಾರಿಭಾಷಿಕ ಶಬ್ದಗಳಂತೂ ಪ್ರತಿಯೊಂದು ವಿಜ್ಞಾನ ಶಾಖೆಯಲ್ಲೂ ನಮ್ಮನ್ನು ಎದು ಗೊಳ್ಳುತ್ತಿರುತ್ತವೆ. ಈ ಸಂದರ್ಭಗಳಲ್ಲಿ ಶಬ್ದ ಮತ್ತು ಅರ್ಥಗಳ ವಿವೇಕ, ಕ್ಷೇತ್ರ ಜ್ಞಾನ, ವಿಶೇಷರೀತಿಯಲ್ಲಿ ನಮ್ಮಲ್ಲಿ ಬೆಳೆಯಬೇಕಾಗುತ್ತದೆ. ತರ್ಕಶಾಸ್ತ್ರವು ಈ ಮಾ ದಲ್ಲಿ ಮೂಲಭೂತವಾದ ಸಹಾಯವನ್ನು ಮಾಡಬಲ್ಲದು. ಎಲ್ಲ ಜಿಜ್ಞಾಸೆಯೂ ವಿಷ ನಿರೂಪಣೆಯ ಮೇಲೆ ಹೊಂದಿಕೊಂಡಿರುತ್ತದೆ. ಅದರ ಅರ್ಥ ಪ್ರತಿಪಾದನೆಗೆ ಅನುಕೂ ವಾಗುವಂತೆ ತರ್ಕಶಾಸ್ತ್ರವು ಹಲವು ನಿಯಮಗಳನ್ನು ಹಾಕುತ್ತದೆ. ಮೂಲತಃ ಅ 'ನಿರೂಪಣೆ' ಎಂದರೇನು, ಅದರ ಸ್ವಭಾವ ಅಥವಾ ಲಕ್ಷಣ ಏನು ಎನ್ನುವುದನ ತಿಳಿಸುತ್ತದೆ. ನಿರೂಪಣೆಯು ಸ್ಪಷ್ಟವಾಗಿಲ್ಲದಿದ್ದರೆ ವಿಚಾರದಲ್ಲಿ ದೋಷಗಳು ಉಂಟ ಬಹುದಾದ್ದರಿಂದ, ವಿಚಾರ-ವಿಜ್ಞಾನವಾದ ತರ್ಕಶಾಸ್ತ್ರವು ಸಹಜವಾಗಿಯೇ ಇ ಕಡೆ ಗಮನ ಕೊಡಬೇಕಾಗಿದೆ.

ಇದರಲ್ಲಿ ನಿರೂಪಣೆಗೆ ಪೂರಕವಾದದ್ದು ವಿಭಜನೆಯ ವಿಧಾನ. ಶಾಸ್ತ್ರೀ ಅಧ್ಯಯನಗಳಲ್ಲಿ ಕ್ಷೇತ್ರ ವೈಶಾಲ್ಯವನ್ನು ಗುರುತಿಸುವುದೊಂದೇ ಅಲ್ಲದೆ, ವಿಶಿಷ್ಟ ವಿಷ ಗಳನ್ನು ಬೇರ್ಪಡಿಸುವ ಅಗತ್ಯವೂ ಇರುತ್ತದೆ. ಈ ಕಾರಣಕ್ಕಾಗಿ ವಿಭಜನೆಯ ತಂತ್ರ ದೋಷರಹಿತವಾಗಿರಬೇಕು. ಇಲ್ಲದಿದ್ದರೆ ವಿಷಯಗಳು ಪರಸ್ಪರ ಆವರಿಸಿಕೊಂಡು ಸೀಮ ನಿರ್ಣಯವಿಲ್ಲದ ಸಂಕೀರ್ಣತೆ ಉಂಟಾಗಬಹುದು. ಆದ್ದರಿಂದ ತರ್ಕಶಾಸ್ತ್ರವು ಇ ಕಡೆಯೂ ಗಮನವನ್ನು ಕೊಟ್ಟು, ತಾರ್ಕಿಕವಾಗಿ ವಿಭಜನೆಯ ವಿಧಾನವನ್ನು ಹ ಕೊಡುತ್ತದೆ.

ಮೊದಲು **'ತಾರ್ಕಿಕ ನಿರೂಪಣ'** ವಿಧಾನವನ್ನು ಪರಿಶೀಲಿಸೋಣ.

ಆದರೆ 'ತಾರ್ಕಿಕ ನಿರೂಪಣೆ' ಎನ್ನುವುದು ನಿರೂಪಣೆಗೆ ವಿಷಯವಾದ ವಸ್ತು ಅಥವಾ ಪದದ ವಿಶೇಷಗಳ ಮೇಲೆ ಹೊಂದಿಕೊಂಡಿರುವುದರಿಂದ ಪೂರ್ವಭಾವಿಯಾಗಿ ಅಂತಹ ವಿಶೇಷ ಅಥವಾ ಅಭಿಧೇಯುಗಳು ಎಷ್ಟು ರೀತಿಯಲ್ಲಿರುತ್ತವೆ ಎನ್ನುವುದನ್ನು ಗಮನಿಸಬೇಕು.

ಅಭಿಧೇಯ ಎಂದರೆ ವಿಧೇಯ ಅಥವಾ ವಿಶೇಷಣ ಪದವು ಉದ್ದೇಶ್ಯ ಪದದೊಂದಿಗೆ ಹೊಂದಿರುವ **ಸಂಬಂಧ.** ಈ ಸಂಬಂಧವನ್ನು ಭಾವಾತ್ಮಕವಾಗಿ ಅಥವಾ ನಿಷೇಧಾತ್ಮಕವಾಗಿ ಸೂಚಿಸಬಹುದು.

೧. ಜಾತಿ (genus)
೨. ಜಾತಿ-ವಿಶೇಷಣ (species)
೩. ನಿರ್ಣಾಯಕ-ವಿಶೇಷಣ (differentia)
೪. ಉಪಲಬ್ಧ-ವಿಶೇಷಣ (property or proprium)
೫. ತಾತ್ಕಾಲಿಕ-ವಿಶೇಷಣ (accidens)

ಈ ಐದು ಉದ್ದೇಶ್ಯ ಮತ್ತು ವಿಧೇಯ ಪದಗಳ ಸಂಬಂಧವನ್ನು **'ಅಭಿಧೇಯು'**ಗಳು (predicables) ಎಂದು ಕರೆಯಬಹುದು.

## 1. ಜಾತಿ ಮತ್ತು 2. ಜಾತಿ-ವಿಶೇಷಣ

ಜಾತಿ ಎಂದರೆ ವರ್ಗ (class). ಒಂದು ನಿರೂಪಣೆಯನ್ನು ನೀಡುವಾಗ ಒಂದು ವರ್ಗದಲ್ಲಿ ಹೇಗೆ ಒಂದು ಜಾತಿ-ವಿಶೇಷಣ ಇರುತ್ತದೆ ಎಂದು ತೋರಿಸಲಾಗುತ್ತದೆ. ಉದಾಹರಣೆಗೆ 'ಜೀವಿಗಳು' ಎನ್ನುವುದು ವರ್ಗ ಅಥವಾ ಜಾತಿ. ಈ ವರ್ಗದಲ್ಲಿ ಅಂಗಗಳಾಗಿ ಇರುವ 'ಮಾನವ' ಒಂದು **ಜಾತಿ-ವಿಶೇಷಣ;** 'ನಾಲ್ಕು ಕಾಲಿನ ಪ್ರಾಣಿ' ಮತ್ತೊಂದು ಜಾತಿ ವಿಶೇಷಣ, ಹೀಗೆ. ಬಾಹ್ಯ ವ್ಯಾಪ್ತಿಯಲ್ಲಿ ಜಾತಿ-ವಿಶೇಷಣ ಜಾತಿಗಿಂತ ಸಂಕುಚಿತವಾಗಿರುತ್ತದೆ. ನಿರೂಪಣೆಯನ್ನು ನೀಡುವಾಗ ಜಾತಿ ವಿಶೇಷಣಕ್ಕೆ ಅತಿ ಸಮೀಪವಾದ ವರ್ಗವನ್ನು ಸೂಚಿಸಬೇಕು. ಎಂದರೆ ಮಾನವನು ವಿಶ್ವದಲ್ಲಿ ಅಸ್ತಿತ್ವ ಹೊಂದಿರುವ ಒಂದು ಘಟಕವಾದರೂ ಆತನು 'ಪ್ರಾಣಿ ವರ್ಗ'ಕ್ಕೆ ಸೇರಿರುವುದರಿಂದ, ನಿರೂಪಣೆಯಲ್ಲಿ ಆ ವರ್ಗದ ಕೆಳಗೆ ಸೇರತಕ್ಕದ್ದು. ಜಾತಿ-ವಿಶೇಷಣನ್ನುವುದು ನಿರೂಪಣಾ ವಾಕ್ಯದಲ್ಲಿ ನಿರೂಪಣೆಗೆ ಒಳಗಾಗುವ ವ್ಯಷ್ಟಿದ್ಯೋತಕವಾದ ಉದ್ದೇಶ್ಯ ಪದ. ಉದಾಹರಣೆ 'ಮಾನವನು ಪ್ರಾಣಿ ವರ್ಗಕ್ಕೆ ಸೇರಿದವನು.' ಎಂದರೆ ಜಾತಿ ಅಥವಾ ವರ್ಗವು ಒಂದು ಸಮಷ್ಟಿಯನ್ನು ಸೂಚಿಸಿದರೆ ಜಾತಿ-ವಿಶೇಷಣವು ಅದರಲ್ಲಿ ವಿಶಿಷ್ಟವಾದ

ಒಂದು ಅಂಗವಾಗುತ್ತದೆ. ಆದರೆ ಇಲ್ಲಿ ನಾವು ಗಮನಿಸಬೇಕಾದದ್ದು, ಪ್ರತ್ಯೇಕವಾಗಿ ತೆಗೆದುಕೊಂಡರೂ ಜಾತಿ ಮತ್ತು ಜಾತಿ-ವಿಶೇಷಣ ಪದಗಳು **ವರ್ಗ** ಗಳಾಗಿಯೇ ಇರಬೇಕು ಅಥವಾ ಇರಬಹುದು. ಉದಾಹರಣೆಗೆ 'ಪ್ರಾಣಿಗಳು' ಒಂದು 'ವರ್ಗ' ವಾಚಕವಾಗಿದ್ದರೆ ಮಾನವ'ನೂ ಒಂದು ವರ್ಗವಾಚಕವೇ. ಎಂದರೆ ಜಾತಿ ಮತ್ತು ಜಾತಿ ವಿಶೇಷಣಗಳನ್ನು ಹೇಳಬೇಕಾದರೆ ಅವುಗಳ ಪರಸ್ಪರ ಸಂಬಂಧ ಹೇಗಿರುವುದೆಂಬುದನ್ನು ಗಮನಿಸಬೇಕು–ಜಾತಿಯೆನ್ನುವುದು ಹೆಚ್ಚು ವ್ಯಾಪ್ತಿಯನ್ನು ಹೊಂದಿದ್ದು ಜಾತಿ ವಿಶೇಷಣವನ್ನು ಅದರಲ್ಲಿ ಒಳಗೊಂಡಿರುತ್ತದೆ. ಎಂದರೆ ಈ ಪದಗಳು ಸಾಪೇಕ್ಷ ಪದಗಳು, ಎಂಬುದನ್ನು ಗಮನದಲ್ಲಿಡಬೇಕು.




ಹೀಗೆ ಜಾತಿ ಮತ್ತು ಜಾತಿ ವಿಶೇಷಣಗಳನ್ನು ಅರಿಯುವುದು ನಿರೂಪಣೆಯಲ್ಲಿ ಸಹಾಯಕವಾಗುವಂತೆ **ತಾರ್ಕಿಕ ವಿಭಜನೆಯಲ್ಲೂ** ಸಹಾಯಕವಾಗುತ್ತದೆ. ಇದನ್ನು ಮುಂದೆ ನೋಡುತ್ತೇವೆ. ಯಾವುದಾದರೂ ಒಂದು 'ಜಾತಿ'ಯು ವ್ಯಾಪ್ತಿಯಲ್ಲಿ ಅತಿ ವಿಸ್ತಾರವಾಗಿದ್ದು ಅದಕ್ಕಿಂತವಿಸ್ತಾರವಾದದ್ದು ಇಲ್ಲದಿದ್ದರೆ ಅದಕ್ಕೆ 'ಸರ್ವೋತ್ಕೃಷ್ಟ ಜಾತಿ' (Summum Genus) ಎನ್ನುತ್ತಾರೆ. ಹಾಗೆಯೇ ಜಾತಿ ವಿಶೇಷಣ ಅತ್ಯಂತ ಸಂಕುಚಿತ ವ್ಯಾಪ್ತಿಯನ್ನು ಹೊಂದಿದ್ದರೆ ಅದನ್ನು 'ನಿಕೃಷ್ಟ ಜಾತಿ ವಿಶೇಷಣ' (infirma species) ಎನ್ನುತ್ತಾರೆ. ಅದ್ಕಕಿಂತ ಕೆಳಮಟ್ಟದ್ದು ಸಿಗುವುದಿಲ್ಲ.

## 3. ನಿರ್ಣಾಯಕ ವಿಶೇಷಣ

ಒಂದು ಜಾತಿಯಲ್ಲಿಯೇ ಇರುವ ಜಾತಿ–ವಿಶೇಷಣವನ್ನು ಇತರ ಜಾತಿ ವಿಶೇಷಣಗಳಿಂದ ಪ್ರತ್ಯೇಕಗೊಳಿಸುವ ಗುಣಕ್ಕೆ '**ನಿರ್ಣಾಯಕ ವಿಶೇಷಣ**' ಎಂದು ಹೆಸರು. ಉದಾಹರಣೆಗೆ ಪ್ರಾಣಿಗಳು ಎನ್ನುವ ಜಾತಿ (genus)ಯಲ್ಲಿ ಅನೇಕ ರೀತಿಯ ಜಾತಿ

ವಿಶೇಷಣಗಳು ಇರುವುದನ್ನು ಕಾಣುತ್ತೇವೆ. ಇವುಗಳಲ್ಲಿ ಮಾನವನೂ ಒಬ್ಬನು. ಆದರೆ ಮಾನವನು ಇತರ ಪ್ರಾಣಿಗಳಿಗಿಂತ ಹೇಗೆ ಭಿನ್ನವಾಗುತ್ತಾನೆ ಎಂದು ತಿಳಿಸಲು ಅವನಲ್ಲಿ ವಿಶಿಷ್ಟವಾಗಿರುವ ಒಂದು ಆಂತರಿಕ ಗುಣವನ್ನು ಎತ್ತಿ ತೋರಿಸುತ್ತೇವೆ. ಅದೇ ಅವನ ಬುದ್ಧಿಶಕ್ತಿ, ವಿಚಾರ ಶಕ್ತಿ. ಈ ವಿಚಾರ ಶಕ್ತಿ ಎನ್ನುವುದೇ ಇತರ ಪ್ರಾಣಿಗಳಿಗಿಂತ ಆತನು ಪ್ರತ್ಯೇಕ ಎಂಬುದನ್ನು ನಿರ್ಣಯಿಸುತ್ತದೆ. ಆದ್ದರಿಂದ ಅದನ್ನು 'ನಿರ್ಣಾಯಕ ವಿಶೇಷಣ'ವೆಂದು ಕರೆಯುತ್ತೇವೆ. ಒಂದು ನಿರೂಪಣೆಯನ್ನು ನೀಡುವಾಗ ಜಾತಿಯನ್ನೂ ಮತ್ತು ಈ ನಿರ್ಣಾಯಕ-ವಿಶೇಷಣವನ್ನು ನೀಡಿದರೆ ಜಾತಿ-ವಿಶೇಷಣ ಸ್ಫುಟವಾಗುತ್ತದೆ. ಉದಾಹರಣೆಗೆ "ಮಾನವನು ವಿಚಾರಮಾಡುವ ಪ್ರಾಣಿ", ಎಂದರೆ ಅರ್ಥ ಸ್ಫುಟವಾಗಿರುತ್ತದೆ.

## 4. ಉಪಲಬ್ಧ-ವಿಶೇಷಣ

ಇದು ನಿರ್ಣಾಯಕ ವಿಶೇಷಣದಂತೆಯೇ ಎಲ್ಲ ವಸ್ತುಗಳಲ್ಲೂ ಸದಾ ಇರುವ ಗುಣವೇ. ಒಂದು ವಸ್ತುವಿನ ರಚನೆಯಲ್ಲಿ ಈ ಗುಣ ಇದ್ದರೂ ನಿರ್ಣಾಯಕ-ವಿಶೇಷಣದಂತೆ ಅಗತ್ಯವಾದುದಲ್ಲ. ಆ ವಸ್ತು ರಚನೆಯಿಂದ ಉಪಲಬ್ಧ ಅಥವಾ ಹುಟ್ಟಿಕೊಂಡದ್ದು, ಅನುಖ್ಯವಾದ, ಆದರೆ ಸದಾ ಇರುವಂತಹ ಉಪಲಕ್ಷಣವಾದ ಒಂದು ಗುಣ. ಉದಾ : ಮಾನವನನ್ನು ಇತರ ಪ್ರಾಣಿಗಳಿಗಿಂತ ಭಿನ್ನವೆಂದು ತೋರಿಸುವುದು "ವಿಚಾರ ಶಕ್ತಿ" ಯಾದರೆ, ಮಾನವನ ಮಾನಸಿಕ ರಚನೆಯಿಂದ ಉತ್ಪನ್ನಗುಣವಾದ ತಾಂತ್ರಿಕ ಕುಶಲತೆ, ಸಮಸ್ಯಾ ಪರಿಹಾರ ಶಕ್ತಿ ಇವು '**ಉಪಲಬ್ಧ ವಿಶೇಷಣ**'ಗಳು.

ಉಪಲಬ್ಧ-ವಿಶೇಷಣಗಳು ಎರಡು ರೀತಿಯಲ್ಲಿರಬಹುದು.

(a) ಅದು 'ಜಾತಿ'ಯ ವಿಶೇಷಣದಿಂದ ಉಪಲಬ್ಧವಾಗಿದ್ದರೆ ಅದಕ್ಕೆ **'ಜಾತಿ-ಉಪಲಬ್ಧ-ವಿಶೇಷಣ'** (Generic property) ಎನ್ನುತ್ತಾರೆ. ಉದಾ : "ಮಾನವನು ರೋಗದಿಂದ ನರಳುವ ಪ್ರಾಣಿ". ಇಲ್ಲಿ ರೋಗ, ಎನ್ನುವುದು ಎಲ್ಲ ಪ್ರಾಣಿಗಳಿಗೂ ಬರುವ ಒಂದು ದೈಹಿಕ ಪರಿಸ್ಥಿತಿ. ಆದ್ದರಿಂದ ಪ್ರಾಣಿಯಾದ ಮಾನವನಿಗೂ ಸಮಾನವಾಗಿಯೇ ಬರುವಂತಹುದು. "ಸಮಬಾಹು ತ್ರಿಕೋನದ ಮೂರು ಕೋನಗಳ ಮೊತ್ತ 180° ಇರುತ್ತದೆ." ಇಲ್ಲಿ "ಮೂರು ಕೋನಗಳ ಮೊತ್ತ 180° ಇರುತ್ತವೆ" ಎನ್ನುವುದು ತ್ರಿಕೋನವೆಂಬುದರ ರಚನೆಗೆ ಸಂಬಂಧಪಟ್ಟಿದ್ದಲ್ಲದೆ, ಸಮಬಾಹುವಾಗಿದ್ದರೆ ಮಾತ್ರ ಹೀಗೆ ಎನ್ನಲಾಗದು. ಆದ್ದರಿಂದ ಇವು ಜಾತಿ-ಉಪಲಬ್ಧ-ವಿಶೇಷಣಗಳು.

(b). ಉಪಲಬ್ಧ-ವಿಶೇಷಣವು 'ಜಾತಿ-ವಿಶೇಷಣ' ಗುಣದಿಂದ ಬಂದಿದ್ದರೆ ಅದಕ್ಕೆ '**ಶುದ್ಧ-ಉಪಲಬ್ಧ-ವಿಶೇಷಣ**' (Specific property) ಎನ್ನಬಹುದು. ಇದು

ಒಂದು ವಸ್ತುವಿನ ವಿಶಿಷ್ಟ ಗುಣವಲ್ಲದಿದ್ದರೂ ಎಂದರೆ ನಿರ್ಣಾಯಕ-ವಿಶೇಷಣವ
ದಿದ್ದರೂ ಅದರೊಡನೆ ಸದಾ ಇರುತ್ತದೆ, ಅಥವಾ ಆದರಿಂದ ಉತ್ಪನ್ನವಾಗುತ್ತದೆ
ಉದಾ: ಮೇಲೆ ಹೇಳಿರುವಂತೆ ಮಾನವನ ತಾಂತ್ರಿಕ ಕುಶಲತೆ, ಅಥವಾ ಸಮುಸಾ
ಪೂರಣ ಶಕ್ತಿ ಇವು ಆತನ ವಿಶಿಷ್ಟ ಗುಣವಾದ ವಿಚಾರಶಕ್ತಿಯಿಂದ ಬಂದಿರುತ್ತವೆ
ಹಾಗೆಯೇ ತ್ರಿಕೋಣಗಳ ವಿಚಾರದಲ್ಲಿ ಉದಾಹರಣೆ ನೀಡಬೇಕಾದರೆ. 'ದ್ವಿಸಮಬಾಹ
ತ್ರಿಕೋನವೆಂದರೆ ಎರಡು ಸಮಕೋನಗಳನ್ನು, ಹೊಂದಿರುವ ತ್ರಿಕೋನ.' ಇಲ್ಲಿ 'ಎರಡ
ಸಮಕೋನ'ಗಳು ತ್ರಿಕೋನದ ಸಾಮಾನ್ಯ ರಚನೆ ಅಥವಾ ಜಾತಿಯಿಂದ ಬರದೆ, ಅದ
ಜಾತಿ-ವಿಶೇಷವಾದ ದ್ವಿ ಸಮಬಾಹು ತ್ರಿಕೋನದಿಂದ ಬಂದಿರುವ ಲಕ್ಷಣ. ಹೀ
ಇದು '**ಶುದ್ಧ ಉಪಲಬ್ಧ-ವಿಶೇಷಣ**' ಆಗುತ್ತದೆ.

## 5. ತಾತ್ಕಾಲಿಕ ವಿಶೇಷಣ

ಇದೊಂದು ಗುಣ. ಆದರೆ 'ವಿಶೇಷಣ' ಅದರಲ್ಲೂ 'ನಿರ್ಣಾಯಕವಿಶೇಷಣ'ದ
ಅಂಗವಲ್ಲ. ಅಲ್ಲದೆ ಇದು 'ಉಪಲಬ್ದ-ವಿಶೇಷಣ' ದಂತೆ 'ನಿರ್ಣಾಯಕ-ವಿಶೇಷಣ'ದಿಂದ
ಉತ್ಪನ್ನವಾದದ್ದೂ ಅಲ್ಲ. ಆದ್ದರಿಂದ ಈ ಎರಡರಿಂದಲೂ ಭಿನ್ನವಾದ, ವಸ್ತುಗಳಲ್ಲಿ
ಬಹುದಾದ, ಗುಣಕ್ಕೆ "**ತಾತ್ಕಾಲಿಕ** (ಅಥವಾ ಆಕಸ್ಮಿಕ) **ವಿಶೇಷಣ**" ವೆಂದು ಕರೆಯು
ತ್ತಾರೆ. ಆಕಸ್ಮಿಕ ಅಥವಾ ತಾತ್ಕಾಲಿಕ ಎನ್ನುವುದರ ಅರ್ಥ ನಮಗಾಗಬೇಕಾದರೆ ಅಂತಹ
ಗುಣಕ್ಕೂ ಅದನ್ನು ಹೊಂದಿರುವ ವಸ್ತುವಿಗೂ ಇರುವ ಸಂಬಂಧ ನಿಕಟವೇ, ಅಗತ್ಯವೇ
ಎನ್ನುವುದನ್ನ ವಿಚಾರಿಸಬೇಕಾಗುತ್ತದೆ. ಹೇಗೆಂದರೆ ಅಂತಹ ಗುಣವನ್ನು ಒಂದು
'ಜಾತಿ' ಅಥವಾ 'ಜಾತಿ-ವಿಶೇಷಣ'ದಿಂದ. ಬೇರ್ಪಡಿಸಿದರೂ ಅವುಗಳ ಅಸ್ತಿತ್ವಕ್ಕೆ ಬಾ
ಯಾಗದಿದ್ದರೆ, ಅಂತಹುದು ಕೇವಲ ಆಕಸ್ಮಿಕವಾಗಿ ಇರುವಂತಹುದು, ಅದು ಇಲ್ಲದಿದ್ದರೂ
ಜಾತಿ ಅಥವಾ ಜಾತಿ-ವಿಶೇಷಣವಾಗಲೀ ಇದ್ದೇ ಇರುತ್ತದೆ ಎಂದು ಗೊತ್ತಾಗುತ್ತದೆ
ತಾತ್ಕಾಲಿಕ-ವಿಶೇಷಣಕ್ಕೆ ಉದಾಹರಣೆ: 'ಇವನ ಹೆಸರು ಗೋವಿಂದ', 'ಈ ಹೂವ
ಕೆಂಪಗಿದೆ'.

ಈ ಉದಾಹರಣೆಗಳಲ್ಲಿ ಎರಡು ರೀತಿಯ ತಾತ್ಕಾಲಿಕ ವಿಶೇಷಣಗಳು ಕಂಡು
ಬರುತ್ತವೆ. ಒಂದನೆಯದು **ನಿವಾರ್ಯ-ತಾತ್ಕಾಲಿಕವಿಶೇಷಣ** (Separabl
accidens) ಎರಡನೆಯದು **ಅನಿವಾರ್ಯ-ತಾತ್ಕಾಲಿಕ-ವಿಶೇಷಣ** (Inseparabl
accidens) ಎಂದರೆ, ಮೊದಲನೆಯದರಲ್ಲಿ ಒಬ್ಬನ ಹೆಸರು 'ಗೋವಿಂದ' ಎನ್ನುವುದಕ್ಕೆ
ಬದಲು 'ರಾಮು' ಎಂದರೂ ವ್ಯಕ್ತಿಯಲ್ಲಿ ವ್ಯತ್ಯಾಸವೇನೂ ಕಾಣುವುದಿಲ್ಲ. ಎಲ್ಲ
ಅಂಕಿತನಾಮಗಳೂ ಹೀಗೆ ನಿವಾರ್ಯ-ತಾತ್ಕಾಲಿಕ-ವಿಶೇಷಣಗಳು. ಎರಡನೆಯದರಲ್ಲಿ
'ಕೆಂಪು' ಬಣ್ಣ, ಆ ಹೂವಿನಲ್ಲಿ ಸಹಜವಾಗಿ ಇರುವಂತಹುದು. ಅದನ್ನು ಸಾಮಾನ್ಯವಾಗಿ

ಬದಲಿಸುವ ಹಾಗಿಲ್ಲ. ಒಂದು ವೇಳೆ ವಿಶೇಷಣವಾದ 'ಕೆಂಪು'ತನ ಆ ಹೂವಿನ ಬಣ್ಣವಾಗದಿದ್ದರೆ, ಆ ಹೂವು ಹೂವಾಗಿಯೇ ಇರುತ್ತದಲ್ಲದೆ ಬೇರೆಯಾಗುವುದಿಲ್ಲ. ಹೀಗೆ ತಾತ್ಕಾಲಿಕ-ವಿಶೇಷಣಗಳು ಎರಡು ವಿಧವಾಗಿರುತ್ತವೆ.

ಹೀಗೆ ವಿಧೇಯ ಅಥವಾ "ಅಭಿಧೇಯ"ಗಳ ಸ್ವರೂಪವನ್ನು ಅರಿತುಕೊಂಡಿದ್ದರೆ 'ನಿರೂಪಣೆ'ಯನ್ನು ನೀಡಲು ನಮಗೆ ಸಹಾಯಕವಾಗುತ್ತದೆ. ಎಂದರೆ, 'ನಿರೂಪಣೆ ತರ್ಕ ವಿಧಾನ'ಕ್ಕೆ ಪ್ರಸ್ತಾವನೆಯ ರೂಪದಲ್ಲಿ ವಿಧೇಯ ರೂಪಗಳನ್ನು ಅರಿತುಕೊಳ್ಳುವುದು ಸಮಂಜಸವಾಗಿರುತ್ತದೆ.

## B. ತಾರ್ಕಿಕ ನಿರೂಪಣೆ

ನಿರೂಪಣೆಯ ಉದ್ದೇಶ ಒಂದು ಪದದ ಗುಣವ್ಯಾಪ್ತಿ ಅಥವಾ ವಿಶೇಷಣ ವ್ಯಾಪ್ತಿಯನ್ನು ಸ್ಫುಟವಾಗಿ ಮತ್ತು ಪೂರ್ಣವಾಗಿ ತಿಳಿಸುವಂತಹುದು, ಈ ಉದ್ದೇಶವನ್ನು ಸಾಧಿಸಲು ಒಂದು ನಿರೂಪಣ ಹೇಗೆ ಇರಬೇಕು, ಅಥವಾ ಯಾವ ನಿಯಮಗಳನ್ನು ಪಾಲಿಸಿದರೆ ಸಮಂಜಸವಾಗುತ್ತದೆ, ಎನ್ನುವುದನ್ನು ತರ್ಕಶಾಸ್ತ್ರ ಹೇಳುತ್ತದೆ. ಈ ನಿಯಮಗಳನ್ನು ಪಾಲಿಸುವ ನಿರೂಪಣೆಗೆ 'ತಾರ್ಕಿಕ ನಿರೂಪಣೆ' ಎನ್ನುತ್ತಾರೆ. ಒಂದು ತಾರ್ಕಿಕ ನಿರೂಪಣೆ ಈ ಕೆಳಗಿನ ನಿಯಮಗಳನ್ನು ಪಾಲಿಸಬೇಕು.

1. ಒಂದು ನಿರೂಪಣೆ ಜಾತಿ ಮತ್ತು ನಿರ್ಣಾಯ-ವಿಶೇಷಣಗಳನ್ನು ಹೇಳಬೇಕು.

ಎಂದರೆ, ಅಗತ್ಯವಲ್ಲದ, ಅಥವಾ ತಾತ್ಕಾಲಿಕವಾಗಿರಬಹುದಾದ ಉಪಲಬ್ಧ ಹಾಗೂ ತಾತ್ಕಾಲಿಕ ವಿಶೇಷಣಗಳನ್ನುಗಳನ್ನು ನೀಡಬಾರದು. ಜಾತಿಯನ್ನು ನೀಡುವುದರಿಂದ ನಿರೂಪಣೆಗೆ ಒಳಗಾಗಿರುವ ಪದ ಯಾವ ಸಾಮಾನ್ಯ ವರ್ಗಕ್ಕೆ ಸೇರಿದ್ದು ಅಥವಾ ವಿಚಾರಕ್ಷೇತ್ರಕ್ಕೆ ಸೇರಿದ್ದು ಎನ್ನುವ ಸೂಚನೆ ಸಿಗುತ್ತದೆ. ಹಾಗೆಯೇ ನಿರ್ಣಾಯಕ ವಿಶೇಷಣವು ಆ ಕ್ಷೇತ್ರ ಅಥವಾ ವರ್ಗದಲ್ಲಿ ಇರಬಹುದಾದ ಇತರ ಜಾತಿ-ವಿಶೇಷಣಗಳಿಂದ ಯಾವ ರೀತಿಯಲ್ಲಿ ವ್ಯತ್ಯಾಸ ಹೊಂದಿರುತ್ತದೆ ಎನ್ನುವ ಸೂಚನೆ ಸಿಗುತ್ತದೆ.

ಉದಾ : 'ಮಾನವ' ಎನ್ನುವ ಪದದ ನಿರೂಪಣೆ ಹೀಗಿರಬೇಕು : "ಮಾನವನು ವಿಚಾರಮಾಡುವ ಶಕ್ತಿಯುಳ್ಳ ಪ್ರಾಣಿ". ಇಲ್ಲಿ 'ಪ್ರಾಣಿ' ಎನ್ನುವ ಪದ ಜಾತಿಯನ್ನೂ, 'ವಿಚಾರ-ಶಕ್ತಿ' ಎನ್ನುವ ಪದ ನಿರ್ಣಾಯಕ ವಿಶೇಷಣವನ್ನೂ ಸೂಚಿಸಿ ಅರ್ಥ ಸ್ಫುಟಗೊಳಿಸುತ್ತವೆ.

2. ಒಂದು ನಿರೂಪಣೆಯು ಯಾವ ಪದವನ್ನು ನಿರೂಪಿಸುವುದೋ ಆ ಪದದ ವಿಶೇಷಣವನ್ನು ಖಚಿತವಾಗಿ ಮತ್ತು ಪೂರ್ಣವಾಗಿ ಹೇಳಬೇಕು. ಎಂದರೆ ವಿಶೇಷಣದ ಯಾವ ಅಂಶವನ್ನೂ ಬಿಡಬಾರದು, ಅದಕ್ಕೆ ಸೇರದ ಯಾವ ಅಂಶವನ್ನೂ ಸೇರಿಸಲೂ ಬಾರದು.

ವಿಶೇಷಣದಲ್ಲಿ ಸಾಮಾನ್ಯ ಗುಣಗಳೂ ಅಗತ್ಯಗುಣಗಳೂ ಎರಡೂ ಇರುತ್ತವೆ. ಈ ಈ ಸಾಮಾನ್ಯ ಗುಣಗಳು ಅನೇಕ ಸಲ ಅಮುಖ್ಯವಾಗಿರುತ್ತವೆ, ಅಥವಾ ಕೇವಲ ವಿವರಣೆಗಳಾಗಿರುತ್ತವೆ. ಅಂತಹವನ್ನು 'ನಿರೂಪಣೆ' ಒಳಗೊಂಡಿರಬಾರದು. ಅಮುಖ್ಯವಲ್ಲದ ಆದರೆ ಸಾಮಾನ್ಯವಾದ ಗುಣಗಳು ಜಾತಿ ಧರ್ಮವನ್ನು ಸೂಚಿಸುತ್ತವೆ. ನಿರೂಪಣೆ ಅಂತಹವನ್ನು ಮತ್ತು ಅಗತ್ಯ ಮತ್ತು ವಿಶಿಷ್ಟಗುಣಗಳನ್ನು ಮಾತ್ರ ನೀಡಬೇಕು. ಉದಾಹರಣೆ : 'ಮಾನವ ಪ್ರಾಣಿ'. ಇಲ್ಲಿ 'ಪ್ರಾಣಿ' ಎನ್ನುವುದು ಸಾಮಾನ್ಯ ಜಾತಿ ಧರ್ಮ. 'ಮಾನವನು ವಿಚಾರ ಮಾಡುವಂತಹವನು' ಇದರಲ್ಲಿ 'ವಿಚಾರ ಮಾಡು' ವಂತಹುದು ಜಾತಿ-ವಿಶಿಷ್ಟವಾದ ನಿರ್ಣಾಯಕ ಧರ್ಮ. ಈ ಎರಡು ಧರ್ಮಗಳನ್ನೂ ನಿರೂಪಣೆ ನೀಡಬೇಕು. ಇವು ಎರಡರಲ್ಲಿ ಯಾವುದು ಒಂದನ್ನು ಕೊಟ್ಟು, ಮತ್ತೊಂದನ್ನು ಬಿಟ್ಟರೂ ನಿರೂಪಣೆ ದೋಷಯುಕ್ತವಾಗುತ್ತದೆ. ಈ ದೋಷಕ್ಕೆ **'ವ್ಯಾಪಕ ನಿರೂಪಣೆ'** ಎನ್ನುತ್ತಾರೆ. ಈ ದೋಷಕ್ಕೆ ಉದಾಹರಣೆ: 'ಮಾನವನು ಒಂದು ಪ್ರಾಣಿ' (ಇಲ್ಲಿ ಕೇವಲ 'ಜಾತಿ' ಕೊಟ್ಟಿದೆ) 'ಮಾನವನು ವಿಚಾರ ಮಾಡುವವನು' (ಇಲ್ಲಿ ಕೇವಲ ನಿರ್ಣಾಯಕ ವಿಶೇಷಣ ಕೊಟ್ಟಿದೆ. ಈ ದೋಷ ಪರಿಹಾರವಾಗಿ ನಿರೂಪಣೆ ತರ್ಕ ಶುದ್ಧವಾಗಬೇಕಾದರೆ ಇವೆರಡನ್ನೂ ಕೂಡಿಸಿ ಹೇಳಬೇಕು : 'ಮಾನವನು ವಿಚಾರಮಾಡಬಲ್ಲ ಪ್ರಾಣಿ'.

ಇದನ್ನು ಮರೆತು ಮತ್ತೇನನ್ನಾದರೂ ಹೆಚ್ಚಿಗೆ ಸೇರಿಸಿದೆವಾದರೆ ಅಂತಹ ನಿರೂಪಣೆ ಮತ್ತೊಂದು ರೀತಿಯ ದೋಷವನ್ನು ಗಳಿಸುತ್ತದೆ. ಅಂತಹ ದೋಷಕ್ಕೆ **'ಸಂಕುಚಿತ ನಿರೂಪಣೆ'** ಎನ್ನುತ್ತಾರೆ.

ಉದಾ : 'ಮಾನವನು ವಿಚಾರ ಮಾಡುವ ಮತ್ತು ಪಟ್ಟಣದಲ್ಲಿ ವಾಸಿಸುವ ಪ್ರಾಣಿ.'

ಇಲ್ಲಿ ಜಾತಿ ಮತ್ತು ನಿರ್ಣಾಯಕ ವಿಶೇಷಣಕ್ಕಿಂತ ಹೆಚ್ಚಾಗಿ ಒಂದು ಗುಣವನ್ನು ಹೇಳಲಾಗಿದೆ. ಅದು 'ಪಟ್ಟಣದಲ್ಲಿ ವಾಸಿಸುವ' ಎನ್ನುವ ತಾತ್ಕಾಲಿಕ-ವಿಶೇಷಣ ಹೀಗೆ ಹೇಳುವುದರಿಂದ ಉದ್ದೇಶಪದವು ಸೂಚಿಸುವ ಸಂಖ್ಯೆಗಿಂತ ವಿಧೇಯ ಪದ ಸೂಚಿಸುವ ಸಂಖ್ಯೆ ಕಡಿಮೆಯಾಗುತ್ತದೆ. ಏಕೆಂದರೆ ಪಟ್ಟಣದಲ್ಲಿ ವಾಸಿಸುವ ಸಂಖ್ಯೆ ಮಾನವನ ಸಂಖ್ಯೆಗಿಂತ ಕಡಿಮೆಯೇ ಆಗುತ್ತದೆ. ಹೀಗೆ ನಿರೂಪಣೆ ದೋಷಯುಕ್ತವಾಗುತ್ತದೆ. ಒಳ್ಳೆಯ ನಿರೂಪಣೆಯ ಲಕ್ಷಣವೇನೆಂದರೆ **ಸಂಖ್ಯಾ ದೃಷ್ಟಿಯಿಂದ ಉದ್ದೇಶ್ಯ ಪದವೂ ವಿಧೇಯ ಪದವೂ ಸಮಾನವಾಗಿರಬೇಕು.**

ಹೀಗೆ ನಿರೂಪಣೆಗೆ ಅಗತ್ಯವಾದ ಜಾತಿ ಮತ್ತು ನಿರ್ಣಾಯಕ ವಿಶೇಷಣಗಳನ್ನು ಕೊಡದೆ ಹೆಚ್ಚಾದ ಯಾವ ಗುಣವನ್ನು ಹೇಳಿದರೂ ಅಂತಹ ಹೆಚ್ಚಿನ ಗುಣವು ಉಪಲಬ್ಧ-ವಿಶೇಷಣ ಅಥವಾ ತಾತ್ಕಾಲಿಕ-ವಿಶೇಷಣ ಆಗಿದ್ದು ಈ ಕೆಳಗಿನ ನಿರೂಪಣ-ದೋಷಗಳಿಗೆ ಎಡೆಮಾಡಿಕೊಡಬಹುದು.

a. ಪುನರುಕ್ತಿ-ನಿರೂಪಣೆ

b. ಸಂಕುಚಿತ-ನಿರೂಪಣೆ

ಈ ದೋಷಗಳನ್ನು ತಾರ್ಕಿಕ ನಿರೂಪಣೆಯು ಎಸಗಬಾರದು.

3. ನಿರೂಪಣೆಯಲ್ಲಿ ನಿರೂಪಣೆಗೆ ಒಳಗಾದ ಪದಕ್ಕಿಂತ ಕ್ಲಿಷ್ಟವಾದ ಪದಗಳನ್ನು ಉಪಯೋಗಿಸಬಾರದು; ಬಳಸಿದ ಪದಗಳು ಉಪಮಾನವಾಗಿರಬಾರದು, ದ್ವಂದ್ವಾರ್ಥವನ್ನು ನೀಡುವಂತಿರಬಾರದು.

ಇದನ್ನು ಅಲ್ಲಗಳೆದ ನಿರೂಪಣೆ ದೋಷಯುಕ್ತವಾಗುತ್ತದೆ. ಆ ದೋಷಗಳನ್ನು (a) 'ಉಪಮಾ-ನಿರೂಪಣೆ' ಅಥವಾ 'ಕ್ಲಿಷ್ಟ' ಅಥವಾ 'ಅಸ್ಪಷ್ಟ ನಿರೂಪಣೆ' ಎನ್ನುತ್ತಾರೆ.

(a) ಮೊದಲ ದೋಷಕ್ಕೆ ಉದಾಹರಣೆ :

'ಸಿಂಹವು ಮೃಗರಾಜ.'

'ಮಾನವನು ಸೃಷ್ಟಿಯ ಮಕುಟ.'

'ಸಂಗೀತ ಬಹು ವೆಚ್ಚದಿಂದ ಆಗುವ ಶಬ್ದ', ಇತ್ಯಾದಿ.

(b) ಎರಡನೆಯ ದೋಷಕ್ಕೆ ಉದಾಹರಣೆ :

'ನೆನಪು ಪ್ರತ್ಯಭಿಜ್ಞೆಯ ದ್ಯೋತಕ'

'ಕಾಮಧೇನು ಒಂದು ತರಹೆಯ ವಸ್ತು' ಇತ್ಯಾದಿ.

4. ಒಂದು ನಿರೂಪಣೆಯಲ್ಲಿ ನಿರೂಪಣೆ ಮಾಡುವಂತಹ ಪದವನ್ನೇ ಮತ್ತೆ ಉಪಯೋಗಿಸಬಾರದು, ಅಥವಾ ಅದಕ್ಕೆ ಸರಿಸಮವಾದ ಪರ್ಯಾಯ ಪದವನ್ನೂ ಉಪಯೋಗಿಸಬಾರದು.

ಇದನ್ನು ಅಲ್ಲಗಳೆದ ನಿರೂಪಣೆ '**ಪರ್ಯಾಯ**' ಅಥವಾ '**ಸಮಾನಾರ್ಥಕ-ನಿರೂಪಣೆ**' ಎನ್ನುವ ದೋಷಕ್ಕೆ ಎಡೆಮಾಡಿಕೊಡುತ್ತದೆ. ಇದನ್ನೇ '**ನಿರೂಪಣಾವೃತ್ತ**' ಎನ್ನುತ್ತಾರೆ.

ಉದಾ : 'ಸತ್ಯವೆಂದರೆ ಮಾತಿನಲ್ಲೂ ನಡತೆಯಲ್ಲೂ ಇರುವ ತಥ್ಯ'

'ಮಾನವನೆಂದರೆ ಮಾನವತೆಯನ್ನು ಹೊಂದಿರುವವನು'

'ಪರೀಕ್ಷಾಧಿಕಾರಿ ಪರೀಕ್ಷೆಗಳನ್ನು ಮಾಡುವವನು' ಇತ್ಯಾದಿ.

5. ಒಂದು ನಿರೂಪಣೆ ಸಾಧ್ಯವಿದ್ದಷ್ಟೂ ಭಾವಾತ್ಮಕ ಆಗಿರಬೇಕು, ನಿಷೇಧಾತ್ಮಕವಾಗಿ ಇರಕೂಡದು.

ಒಂದು ಪದ ಏನನ್ನು ಸೂಚಿಸುತ್ತದೆ ಎನ್ನುವುದನ್ನು ಭಾವಾತ್ಮಕವಾಗಿ ಹೇಳಬೇಕಲ್ಲದೆ, ಅದು ಯಾವುದನ್ನು ಸೂಚಿಸುವುದಿಲ್ಲ ಎಂದು ಹೇಳಿದರೆ ಸಮಂಜಸವಾಗುವುದಿಲ್ಲ. ಆದ್ದರಿಂದ ನಿಷೇಧಾತ್ಮಕ ನಿರೂಪಣೆಯು ನಿರೂಪಣೆಯ ಉದ್ದೇಶವನ್ನೇ ಅಲ್ಲಗಳೆಯುತ್ತದೆ. ಹಾಗೆ ನಿಷೇಧಾತ್ಮಕವಾದ ನಿರೂಪಣೆ ದೋಷಕ್ಕೆ ಗುರಿಯಾಗುತ್ತದೆ. ಆ ದೋಷವನ್ನು **'ನಿಷೇಧಾತ್ಮಕ ನಿರೂಪಣೆ'** ಎನ್ನುತ್ತಾರೆ.

ಉದಾ : 'ಸತ್ಯವಂದರೆ ಸುಳ್ಳಲ್ಲ.'
'ಚೇತನವೆಂದರೆ ಜಡವಲ್ಲ.'
'ಶಾಂತಿ ಎಂದರೆ ಅಶಾಂತಿಯು ಇಲ್ಲದಿರುವಿಕೆ' ಇತ್ಯಾದಿ.

ಈ ರೀತಿಯಲ್ಲಿ ತರ್ಕಶಾಸ್ತ್ರವು ವಿಚಾರದ ದೃಷ್ಟಿಯಿಂದ, ಅದನ್ನು ಸ್ಪಷ್ಟವಾಗಿ ಅಭಿವ್ಯಕ್ತ ಮಾಡಬೇಕೆನ್ನುವ ದೃಷ್ಟಿಯಿಂದ ಪದಗಳ ತಾರ್ಕಿಕ ನಿರೂಪಣೆ ಹೇಗಿರಬೇಕು ಎಂದು ನಿಯಮಗಳನ್ನು ಹಾಕಿದೆ. ಇದನ್ನು ಪಾಲಿಸದಿದ್ದರೆ ಮೇಲೆ ಸೂಚಿಸಿರುವ ದೋಷಗಳಿಗೆ ನಮ್ಮ ವಿಚಾರ ಈಡಾಗುತ್ತದೆಂದು ನಾವು ಗಮನಿಸಿ, ಅವುಗಳಿಂದ ತಪ್ಪಿಸಿಕೊಳ್ಳಲು ಯತ್ನಿಸಬೇಕು.

**ನಿರೂಪಣೆ ಸದಾ ಸಾಧ್ಯವೆ ?**

ಈ ಮೇಲಿನ ನಿಯಮಗಳನ್ನು ಪಾಲಿಸಿಕೊಂಡು ಎಲ್ಲ ಪದಗಳ ವಿಚಾರದಲ್ಲೂ ನಿರೂಪಣೆಯನ್ನು ತಾರ್ಕಿಕವಾಗಿ ನೀಡಲು ಸಾಧ್ಯವೇ ಎನ್ನುವ ಪ್ರಶ್ನೆ ಬರಬಹುದು. ಎಂದರೆ ತಾರ್ಕಿಕ ರೀತಿಯ ನಿರೂಪಣೆಗೆ ಮಿತಿಯಿಲ್ಲವೇ ಎನ್ನಬಹುದು. ಹಾಗೆ ಇರುವ ಪಕ್ಷದಲ್ಲಿ ಅಂತಹ ಮಿತಿಗಳನ್ನು ನಾವು ಅರಿಯಬೇಕು. ನಿರೂಪಣೆಯ ತಾರ್ಕಿಕ ನಿಯಮವು ,ಎಲ್ಲ ಸಮಯದಲ್ಲೂ 'ಜಾತಿ' ಮತ್ತು 'ನಿರ್ಣಾಯಕ-ವಿಶೇಷಣ'ವನ್ನು ನೀಡಬೇಕು ಎನ್ನುತ್ತದೆ. ಆದರೆ ಹಲವು ಸಲ ಅದು ಆಗದೆ ಹೋಗಬಹುದು.

a. ಉದಾಹರಣೆಗೆ: ಈ ಮೊದಲೇ 'ಜಾತಿ' ಎನ್ನುವುದರಲ್ಲಿ **ಸರ್ವೋತ್ಕೃಷ್ಟ-ಜಾತಿ'** ಎನ್ನುವುದು ಇರಬಹುದು ಎಂದು ತೋರಿಸಿದ್ದೇವೆ. ಅಂತಹುದನ್ನು ತಾರ್ಕಿಕ-ನಿರೂಪಣ ವಿಧಾನವನ್ನೇ ಅನುಸರಿಸಿ ನಿರೂಪಿಸಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕಿಂತ ಉತ್ಕೃಷ್ಟವಾದ 'ಜಾತಿ'ಯ ಕ್ಷೇತ್ರದಲ್ಲಿ ಇದನ್ನು ತರಲು ಸಾಧ್ಯವಾಗದೇ ಹೋಗಬಹುದು. ಉದಾ : 'ಅಸ್ತಿತ್ವ' ಇದೇ ಒಂದು ಸರ್ವೋತ್ಕೃಷ್ಟ ಜಾತಿ. ಇದಕ್ಕೆ ನಿರೂಪಣೆ ಸಿಗುವುದಿಲ್ಲ.

b. ಹಲವು **ಏಕ ಮತ್ತು ಅಮೂರ್ತವಾಚಕ** ಪದಗಳು ಅಮೂರ್ತ ಪದಗಳು ತಾರ್ಕಿಕ-ನಿರೂಪಣ ವಿಧಿಗೆ ಸಿಗುವುದಿಲ್ಲ. ಅವು ಮೂಲಭೂತ ಗುಣಗಳನ್ನು

ಸೂಚಿಸುವಂತಿದ್ದು, ಅವಕ್ಕಿಂತ ಸರಳ ಕಲ್ಪನೆಗಳು ಇಲ್ಲದಿದ್ದ ನಿರೂಪಣೆಗೆ ಸಿಗುವುದಿಲ್ಲ. ಉದಾ : ಸಮಾನತೆ, ಹಸಿವು, ಅಣುತ್ವ ಇತ್ಯಾದಿ.

c. **ಅಂಕಿತವಾಚಕ ಪದಗಳು** ಎಲ್ಲ ನಾಮಾಂಕಿತಗಳು ವಸ್ತುಗಳನ್ನು ಮಾತ್ರ ಸೂಚಿಸುವಂತಿದ್ದು, ಗುಣಗಳನ್ನು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ. ಅವು ವಸ್ತುನಿರ್ದೇಶಕವೇ ಹೊರತು, ಗುಣನಿರ್ದೇಶಕವಲ್ಲ. ಉದಾ : ಭೀಮ, ಸತ್ಯಪಾಲ, ಸಾವಿತ್ರಿ ಇತ್ಯಾದಿ.

ಇಷ್ಟೇ ಅಲ್ಲದೆ, ಹಲವು ಸಲ ನಿರೂಪಣೆಗೆ ಸಿಗದಂತಹ ಸನ್ನಿವೇಶಗಳೂ ಇದ್ದು, ಅವುಗಳನ್ನು ಉದಾಹರಣೆ ಅನುಸರಣ ಮತ್ತು ಕಾರ್ಯಾಚರಣ ಇತ್ಯಾದಿಗಳಿಂದಲೇ ತೋರಿಸಬೇಕಾಗುತ್ತದೆ. ಇವು ತಾರ್ಕಿಕ ರೀತಿಯ ನಿರೂಪಣೆ ಅಲ್ಲದಿದ್ದರೂ ಅರ್ಥ ಗ್ರಹಣಕ್ಕೆ ಅನುಕೂಲವಾಗಿರುತ್ತವೆಂದು ಗಮನಿಸಬೇಕು.

ಉದಾ : 'ಕಾರುಣ್ಯ'ಕ್ಕೆ ಯಾವುದಾದರೂ ಕಾರುಣ್ಯಶೀಲ ಪ್ರವೃತ್ತಿಯನ್ನು ಉದಾಹರಣೆ'ಯಾಗಿ ಕೊಟ್ಟೇ ತೋರಿಸಬೇಕು.

೨. 'ನರ್ತನ' ಎಂದರೇನೆಂಬುದನ್ನು 'ಅನುಕರಣ' ರೀತಿಯಲ್ಲೇ ತೋರಿಸಬೇಕು.

೩. ಭೌತಿಕ ಪ್ರಪಂಚದಲ್ಲಿ ಹಲವು ಪ್ರಕ್ರಿಯೆ ಅಥವಾ ಕಲ್ಪನೆಗಳನ್ನು— ಉದಾ : ಗುರುತ್ವಾಕರ್ಷಣ, ಘನ, ಇತ್ಯಾದಿ— ಅವು ಹೇಗೆ 'ಕೆಲಸ' ಮಾಡುತ್ತದೆ ಎನ್ನುವುದನ್ನು ತೋರಿಸಿಯೇ ಅರ್ಥಮಾಡಿಕೊಡಬೇಕು.

ಹೀಗೆ ತಾರ್ಕಿಕ-ನಿರೂಪಣೆಗಳಿಗೆ ಮಿತಿಗಳಿವೆ. ಆದರೆ ಎಲ್ಲೆಲ್ಲಿ ಮಾತಿನಲ್ಲಿ ನಮ್ಮ ವಿಚಾರವನ್ನು ವ್ಯಕ್ತಮಾಡಲು ಸಾಧ್ಯವೋ ಅಲ್ಲಿ ಸಾಧ್ಯವಾದ ಮಟ್ಟಿಗೂ ನಿಯಮಗಳನ್ನು ಪಾಲಿಸಿದೆವಾದರೆ ವಿಚಾರ ಮತ್ತು ಅರ್ಥ ಸ್ಫುಟಗೊಳ್ಳುವುದರಲ್ಲಿ ಸಂಶಯವಿಲ್ಲ.

## C. (i) ತಾರ್ಕಿಕ ವಿಭಜನೆ

ಇದುವರೆವಿಗೂ ಪದಗಳನ್ನು ತಾರ್ಕಿಕವಾಗಿ ಹೇಗೆ ನಿರೂಪಣೆ ಮಾಡಬಹುದೆಂದು ನೋಡಿದ್ದೇವೆ. ಎಂದರೆ, ನಿರೂಪಣೆಯಲ್ಲಿ ಪದವು ಸೂಚಿಸುವ ವಸ್ತು (ಕಾಲ್ಪನಿಕ ಅಥವಾ ವಾಸ್ತವಿಕವಾಗಿರಬಹುದು) ಎಷ್ಟು ಆಳವಾದ ಮತ್ತು ವಿಸ್ತಾರವಾದ ರೀತಿಯಲ್ಲಿ ಗುಣಾನ್ವಿತವಾಗಿರುತ್ತದೆ ಅಥವಾ 'ವಿಶೇಷಣ' ಗಳನ್ನು ಹೊಂದಿರುತ್ತದೆ ಎನ್ನುವುದನ್ನು ನೋಡಿದ್ದೇವೆ. ಎಲ್ಲ ಪದಗಳೂ ಸಾಮಾನ್ಯವಾಗಿ ವಿಶೇಷಣಗಳನ್ನು ಸೂಚಿಸುವ ಹಾಗೆಯೇ 'ವಾಸ್ತವಿಕವಾದ ಪದಾರ್ಥ'ಗಳನ್ನೂ ಅವುಗಳ 'ಸಂಖ್ಯೆ'ಯನ್ನೂ ತೋರಿಸುತ್ತವೆ. ವಸ್ತುಸೂಚಕ ಅಥವಾ ಸಂಖ್ಯಾಸೂಚಕ ಅಂಶ ಅರ್ಥವಾಗದ ಹೊರತು

ಪದಗಳ ನಿರ್ದಿಷ್ಟ 'ರೂಪ' ನಮಗೆ ಗೊತ್ತಾಗದಿರುವುದರಿಂದ ತರ್ಕಶಾಸ್ತ್ರವು ಇದ ವಿಚಾರವಾಗಿಯೂ ಅಧ್ಯಯನ ನಡೆಸುತ್ತದೆ. ಒಂದು ಪದದ ವಸ್ತು ಅಥವಾ ಸಂಖ್ಯಾ ರ್ಥದ ವಿಸ್ತಾರವನ್ನು ಅಳೆಯಬೇಕಾದರೆ ಅದರಲ್ಲಿ, ಅದಕ್ಕಿಂತ ಕ್ಷೇತ್ರದಲ್ಲಿ ಸಣ್ಣದಾದ ಎಷ್ಟು ಘಟಕಗಳು ಅಡಗಿವೆ ಎನ್ನುವುದನ್ನು ತೋರಿಸಿಕೊಡುವುದೇ ಇದರ ಉದ್ದೇಶ ಎಂದರೆ ಒಂದು ಪದದ ತಾರ್ಕಿಕ ಅರ್ಥವನ್ನು ಗಮನಿಸಿ, ಅದು ಎಷ್ಟು ವಸ್ತುಗಳಿಗೆ ಅನ್ವಯವಾಗುತ್ತದೆನ್ನುವುದನ್ನು ವಿಭಜನಕ್ರಿಯೆಯ ಮೂಲಕ ತೋರಿಸಿಕೊಡುವಂತಹು ದಕ್ಕೆ 'ತಾರ್ಕಿಕ ವಿಭಜನೆ' ಎನ್ನುತ್ತಾರೆ. ಮೇಲೆ ನಾವು ನೋಡಿದ 'ತಾರ್ಕಿಕ ನಿರೂಪಣೆ' ಮತ್ತು ಇಲ್ಲಿ ನೋಡುವ 'ತಾರ್ಕಿಕ-ವಿಭಜನೆ'ಗಳು ಪರಸ್ಪರ ಪೂರಕ ಗಳಾಗಿದ್ದು ಒಂದು ವಸ್ತುವಿನ ಪೂರ್ಣ ಸ್ವರೂಪವನ್ನು ನೀಡುತ್ತವೆ. 'ತಾರ್ಕಿಕ ವಿಭಜನೆ'ಯೆನ್ನುವುದನ್ನು ಸಾಮಾನ್ಯವಾದ ಅರ್ಥದ 'ಭೌತಿಕ ವಿಭಜನೆ' (Physical division) ಮತ್ತು 'ತಾತ್ವಿಕ ವಿಭಜನೆ' (Metaphysical division) ಗಳಿಂದ ಬೇರ್ಪಡಿಸಬೇಕು. ಒಂದು ವಸ್ತುವನ್ನು ಭೌತಿಕವಾದ ರೀತಿಯಲ್ಲಿ ಎಂದರೆ ಅದರ ಅಂಗ ಗಳನ್ನು ವಿಶ್ಲೇಷಿಸಿ ತೋರಿಸುವುದು 'ಭೌತಿಕ ವಿಭಜನೆ' ಆಗುತ್ತದೆ. ಉದಾಹರಣೆಗೆ :

೧. ಒಂದು ಮೇಜು. ಇದನ್ನು ಅದರ ಕಾಲುಗಳು, ಮೇಲಿನ ಹಲಗೆ, ಎಳೆಯುವ ಡ್ರಾ ಇತ್ಯಾದಿ ಅಂಗಗಳಾಗಿ ವಿಂಗಡಿಸಬಹುದು.

೨. ಮನುಷ್ಯನನ್ನು ತಲೆ, ಕೈಕಾಲುಗಳು, ಮುಂಡ ಇತ್ಯಾದಿಗಳಾಗಿ ವಿಂಗಡಿಸು ವುದು.

೩. ಒಂದು ದೇಶವನ್ನು ಪ್ರಾಂತ್ಯಗಳಾಗಿ ವಿಂಗಡಿಸುವುದು.

ಒಂದು ವಸ್ತುವಿನ ಗುಣಗಳನ್ನು ವಿಶ್ಲೇಷಿಸಿ ಅದರಲ್ಲಿ ಎಂತಹ ಗುಣಗಳಿವೆ ಎಂದು ಎಣಿಸುವುದು 'ತಾತ್ವಿಕ ವಿಭಜನೆ' ಆಗುತ್ತದೆ. ಉದಾಹರಣೆಗೆ ಒಂದು ಹೂವು—ಅದರ ಮೃದುತ್ವ, ಬಣ್ಣ, ಆಕಾರ, ಪರಿಮಾಣ ಇತ್ಯಾದಿಗಳನ್ನು ಪರಿಗಣಿಸುವುದು. ಒಂದು ನದಿ ಅದರ ಮುಗ ವಕ್ರ ಅಥವಾ ನೇರ ಗತಿ ನೀರಿನ ಬಣ್ಣ ಇತ್ಯಾದಿಗಳನ್ನು ಗಮನಿಸುವುದು.

ಈ ಎರಡು ರೀತಿಯ ವಿಭಜನೆಗಳೂ 'ತಾರ್ಕಿಕ ವಿಭಜನೆ'ಯಲ್ಲ. ಇದನ್ನು ಗಮನ ದಲ್ಲಿಟ್ಟುಕೊಂಡು ತರ್ಕವು ಒಪ್ಪುವಂತಹ ವಿಭಜನೆ ಎಂತಹುವೆನ್ನುವುದನ್ನು ಈಗ ನೋಡೋಣ.

ತಾರ್ಕಿಕವಾಗಿ ಯಾವುದಾದರೂ ಒಂದು ವಿಭಜನೆಯ ಆಧಾರವನ್ನು ಆಶ್ರಯಿಸಿ ಒಂದು ಪದದ 'ಜಾತಿ'ಯನ್ನು ವಿಶ್ಲೇಷಿಸಿ ಅದರಲ್ಲಿನ 'ಜಾತಿ-ವಿಶೇಷಣ'ಗಳು ಎಷ್ಟಿವೆ ಎಂದು ತೋರಿಸುವ ಕ್ರಮಕ್ಕೆ 'ತಾರ್ಕಿಕ ವಿಭಜನೆ' ಎಂದು ಹೆಸರು. ಎಂದರೆ ಈ ವಿಭಜನೆಯಲ್ಲಿ ವಿಭಜಿತ ಪದವೂ ಜಾತಿ-ವಾಚಕವಾಗಿರುವ ಹಾಗೆಯೇ ಅದರ ಅಂಶ

ಗಳೂ ಕೂಡ **ಜಾತಿ-ವಾಚಕ**ಗಳೇ ಆಗಿರುತ್ತವೆ. ಈ ಅಂಶಗಳೂ ಕೂಡ ಪುನಃ ವಿಭಜನೆಗೆ ಯೋಗ್ಯವಾಗಿರಬೇಕು. ಎಂದರೆ 'ಭೌತಿಕ-ವಿಭಜನೆ'ಗೆ ಮತ್ತು 'ತಾತ್ವಿಕ-ವಿಭಜನೆ'ಗೆ ಇಲ್ಲಿ ಅವಕಾಶವಿರುವುದಿಲ್ಲ.

ಅಲ್ಲದೆ ವಿಭಜನೆಯನ್ನು ಮಾಡುವಾಗ ಸೂಚಿತ ಪದದ ಒಂದು ಬಹು ಮುಖ್ಯವಾದ ಗುಣವನ್ನು ಆಶ್ರಯಿಸಿ ವಿಭಜನೆ ಮಾಡಬೇಕು. ಉದಾಹರಣೆಗೆ ಮಾನವ ವರ್ಗವನ್ನು ವಿಭಜಿಸಬೇಕಾದರೆ 'ಜನಾಂಗ', 'ದೇಶ', 'ಭಾಷೆ', ಮುಂತಾದ ಯಾವುದಾದರೂ ಒಂದು ಗುಣ ಅಥವಾ ವಿಚಾರವನ್ನು ಆಶ್ರಯಿಸಿ ವಿಭಜಿಸಬೇಕು. ಈ **'ವಿಭಜನಾ ಆಧಾರ'ವೇ** (fundamentum divisionis) ತಾರ್ಕಿಕ ವಿಭಜನೆಗೆ ಮೂಲಸೂತ್ರ. ಇದರ ವಿಚಾರವಾಗಿ ನಾವು ಗಮನಿಸಬೇಕಾದದ್ದು ಏನೆಂದರೆ ಅಂತಹ ಆಧಾರ ಆ ವರ್ಗ ಅಥವಾ ಜಾತಿಗೆ ಅನ್ವಯವಾಗುವ ಬಹು **ಪ್ರಮುಖ ಅಂಶವನ್ನು** ತೋರಿಸಿಕೊಡಬೇಕು. ಒಂದು ವಿಭಜನೆಯಲ್ಲಿ ಒಂದೇ ಪ್ರಮುಖ ಅಂಶವನ್ನು ಕೊನೆಯತನಕ ಅನುಸರಿಸಬೇಕು. ಒಂದಕ್ಕಿಂತ ಹೆಚ್ಚಿನ 'ವಿಭಜನಾ ಆಧಾರ'ವನ್ನು ಅನುಸರಿಸಿದರೆ ದೋಷವಾಗುತ್ತದೆ. ಈ ದೋಷಕ್ಕೆ **'ಸಂಕರ ವಿಭಜನೆ'** (cross-division) ಎಂದು ಹೆಸರು.

ಉದಾಹರಣೆಗೆ: 'ಮಾನವ' ಎನ್ನುವುದರ ತಾರ್ಕಿಕ ವಿಭಜನೆಗೆ ವಿಭಜನಾ-ಆಧಾರ 'ಭಾಷೆ'. ಈ ಆಧಾರವನ್ನು ಅನುಸರಿಸಿ ವಿಭಜನೆ ಹೀಗಿರುತ್ತದೆ:

ಇಂಗ್ಲಿಷ್, ಫ್ರೆಂಚ್, ಗ್ರೀಕ್, ರೋಮನ್, ರಷ್ಯನ್, ಉರ್ದು, ಹಿಂದಿ, ಕನ್ನಡ, ಗುಜರಾತಿ, ಹೀಗೆ.

ಇಲ್ಲಿ ಒಂದೇ 'ವಿಭಜನಾ ಆಧಾರ' ಅಡಗಿದೆ. ಆದರೆ ಒಂದಕ್ಕಿಂತ ಹೆಚ್ಚಿನ ಆಧಾರಗಳನ್ನು-ಎರಡೋ ಮೂರೋ-ಸೇರಿಸಿದರೆ 'ಸಂಕರ ವಿಭಜನೆ'ಗೆ ತುತ್ತಾಗುತ್ತದೆ.

ಉದಾಹರಣೆಗೆ: 'ಭಾಷೆ', 'ಜನಾಂಗ', 'ದೇಶ' ಇವುಗಳನ್ನು ಒಂದೇ ವಿಭಜನೆಯಲ್ಲಿ ಉಪಯೋಗಿಸಿದರೆ ವಿಭಜನೆಯೇ ಕಷ್ಟವಾಗುತ್ತದೆ. 'ಜಾತಿ-ವಿಶೇಷಣ'ಗಳು ಸ್ಪಷ್ಟವಾಗಿ ಇರುವುದಿಲ್ಲ.

ಇದನ್ನು ಗಮನಿಸಿ ತರ್ಕಶಾಸ್ತ್ರವು ವಿಭಜನೆಗೆ ಅನ್ವಯಿಸುವಂತೆ ಈ ಕೆಳಗಿನ ನಿಯಮಗಳನ್ನು ಹಾಕಿದೆ. ಇವುಗಳನ್ನು ಪಾಲಿಸುವ ವಿಭಜನೆ 'ತಾರ್ಕಿಕ-ವಿಭಜನೆ' ಎಂದೆನಿಸಿ ಎಲ್ಲ ದೋಷಗಳನ್ನೂ ನಿವಾರಿಸಿಕೊಂಡಿರುತ್ತದೆ.

### ತಾರ್ಕಿಕ-ವಿಭಜನೆಯ ನಿಯಮಗಳು

1. ತಾರ್ಕಿಕ ವಿಭಜನೆ ಯಾವಾಗಲೂ ಒಂದು ವರ್ಗದ ವಿಭಜನೆಯೇ ಹೊರತು ವ್ಯಕ್ತಿಯ ವಿಭಜನೆಯಲ್ಲ.

ಉದಾಹರಣೆಗೆ: 'ಮಾನವ' ಎಂಬುದನ್ನು ವಿಭಜಿಸಿದರೆ ಅಲ್ಲಿನ ಅಂಶಗಳೂ ವರ್ಗ

ಸೂಚಕ ಪದಗಳಾಗಿರುತ್ತವೆ—ಯೂರೋಪಿನವರು, ಏಷ್ಯಾದವರು, ಅಮೆರಿಕಾದವರು, ಆಫ್ರಿಕಾದವರು, ಆಸ್ಟ್ರೇಲಿಯಾದವರು. (ಇಲ್ಲಿ ಉಪಯೋಗಿಸಿರುವ 'ವಿಭಜನಾ ಆಧಾರ' ಆ ಜನರು ವಾಸಿಸುತ್ತಿರುವ ಭೌಗೋಳಿಕ ಪ್ರದೇಶ ಅಥವಾ 'ಖಂಡ' ಎನ್ನುವುದು) ಹೀಗೆ ವಿಭಜಿಸಲ್ಪಟ್ಟ ಅಂಶಗಳೂ ಕೂಡ ವರ್ಗಗಳೇ ಆಗಿದ್ದು, ಮತ್ತೂ ವಿಭಜನೆಗೆ ಅನುವು ಕೊಡುವಂತಿರಬೇಕು. 'ಮಾನವ' ಎನ್ನುವ ಪದವನ್ನು ರಾಮು, ಕೃಷ್ಣ, ಜಾನ್, ಮೇರಿ ಎಂದು ವ್ಯಕ್ತಿಗಳನ್ನಾಗಿ ವಿಭಜಿಸಬಾರದು.

ಅಲ್ಲದೆ, ವ್ಯಕ್ತಿಯ ವಿಭಜನೆ ತಾರ್ಕಿಕ ವಿಭಜನೆ ಆಗುವುದಿಲ್ಲ. ಉದಾಹರಣೆ: 'ಅಶೋಕ' ಎನ್ನುವ ವ್ಯಕ್ತಿಯನ್ನು ಆತನ ದೈಹಿಕ ಅಂಗಗಳಾಗಿ ವಿಭಜಿಸಕೂಡದು. ಅಥವಾ ಆತನ ಗುಣಗಳ ವಿಶ್ಲೇಷಣೆ ಆಗಬಾರದು. ಇವೆರಡೂ ಕ್ರಮವಾಗಿ 'ಭೌತಿಕ-ವಿಭಜನೆ' ಮತ್ತು 'ತಾತ್ವಿಕ ವಿಭಜನೆ' ಎಂಬ ಅತಾರ್ಕಿಕ ವಿಭಜನೆಗಳಾಗುತ್ತವೆ.

2. ತಾರ್ಕಿಕ ವಿಭಜನೆ ಒಂದೇ 'ವಿಭಜನಾ-ಆಧಾರ'ವನ್ನು ಹೊಂದಿದ್ದು, ಅದರ ನೆರವಿನಲ್ಲೇ ವಿಭಜನೆಯನ್ನು ಅಂತಿಮವಾಗಿ ನಡೆಸಬೇಕು.

'ವಿಭಜನಾ ಆಧಾರ' ಎಂದರೆ ವರ್ಗದ ಹಲವು ವಸ್ತುಗಳಲ್ಲಿದ್ದು, ಇತರ ವಸ್ತುಗಳಲ್ಲಿ ಇದ್ದಿರಲಾರದ ಒಂದು ಗುಣ. ಇದನ್ನು ಆಧಾರವಾಗಿಟ್ಟುಕೊಂಡು ವಿಭಜನೆ ಮಾಡಬೇಕು. ಇಂತಹ 'ವಿಭಜನಾ-ಆಧಾರ' ಒಂದು ವಿಭಜನೆಯಲ್ಲಿ ಒಂದೇ ಆಗಿರಬೇಕು. ಎಂದರೆ ಒಂದೇ ವಿಭಜನಾ ಕ್ರಮದಲ್ಲಿ ಒಂದಕ್ಕಿಂತ ಹೆಚ್ಚಿನ ಆಧಾರಗಳನ್ನು ಅನುಸರಿಸಬಾರದು. ಈ ಮೊದಲೇ ನೋಡಿರುವಂತೆ ಈ ನಿಯಮದ ಉಲ್ಲಂಘನೆ 'ಸಂಕರ-ವಿಭಜನೆ' ಎಂಬ ದೋಷಕ್ಕೆ ಎಡೆಮಾಡಿಕೊಡುತ್ತದೆ.

ಉದಾಹರಣೆ: ವಿದ್ಯಾರ್ಥಿಗಳನ್ನು ವಿಭಜನೆಮಾಡಲು ಅವರು ಅಭ್ಯಾಸಮಾಡುವ ಶಾಸ್ತ್ರಗಳನ್ನು ಆಧಾರವಾಗಿಟ್ಟುಕೊಂಡು ವಿಭಜಿಸಬಹುದು. ತರ್ಕದ ವಿದ್ಯಾರ್ಥಿಗಳು, ಚರಿತ್ರೆಯ ವಿದ್ಯಾರ್ಥಿಗಳು, ವಿಜ್ಞಾನದ ವಿದ್ಯಾರ್ಥಿಗಳು, ಹೀಗೆ. ಈ 'ಶಾಸ್ತ್ರ'ಗಳು 'ವಿಭಜನಾ-ಆಧಾರ'ವಾಗುತ್ತವೆ. ಹೀಗೆ ಮಾಡುವ ವಿಭಜನೆ ತಾರ್ಕಿಕವಾಗಿ ಸಮಂಜಸವಾಗಿರುತ್ತದೆ.

ಇದನ್ನು ಮರೆತು 'ಶಾಸ್ತ್ರ'ದ ಜೊತೆಗೆ, ಅವರು ಬರುವ 'ಊರು', ಅವರ 'ಶ್ರೀಮಂತಿಕೆ' ಅಥವಾ 'ಬಡತನ', ಅವರ 'ಭಾಷೆ' ಮುಂತಾದುವನ್ನು ಒಂದೇ ವಿಭಜನೆಯಲ್ಲಿ ಸೇರಿಸಿಕೊಂಡರೆ ವಿಭಜನೆ 'ಸಂಕರ-ವಿಭಜನೆ'ಯ ದೋಷಕ್ಕೆ ತುತ್ತಾಗುತ್ತದೆ.

3. ತಾರ್ಕಿಕ ವಿಭಜನೆಯಲ್ಲಿ ವಿಭಜನೆಗೆ ಒಳಪಟ್ಟ ವರ್ಗಸೂಚಕ ಪದ ಮತ್ತು ವಿಭಜಿತ ಅಂಶಗಳಿಂದ ಸೂಚಿತವಾದ 'ಉಪವರ್ಗ' (Sub-classes)ಗಳು ವಸ್ತು-ವ್ಯಾಪಕ ದೃಷ್ಟಿಯಿಂದ ಸಮಾನವಾಗಿರಬೇಕು.





ಎಂದರೆ, ಉಪವರ್ಗಗಳೆಲ್ಲಾ ಸೇರಿದರೆ ವರ್ಗದ ವ್ಯಾಪ್ತಿಯಷ್ಟೇ ಆಗಬೇಕು. ಉದಾಹರಣೆ 'ಭೌತಿಕ ವಸ್ತುಗಳು' ಇನನ್ನು ವಿಭಜಿಸಿದರೆ–ಘನ ವಸ್ತುಗಳು, ದ್ರವ ವಸ್ತುಗಳು ಮತ್ತು ಅನಿಲ ವಸ್ತುಗಳು ಎಂಬ ಉಪವರ್ಗಗಳು ಬರುತ್ತವೆ. ಈ ಮೂರೂ ಸೇರಿ ಭೌತಿಕ ವಸ್ತುಗಳ ಕ್ಷೇತ್ರ ಪರಿಮಿತಿಯನ್ನು ಸಂಪೂರ್ಣವಾಗಿ ಆವರಿಸುವಂತಿರುತ್ತವೆ.

ಈ ನಿಯಮದ ಉಲ್ಲಂಘನೆ ಈ ಕೆಳಗಿನ ರೀತಿಯಲ್ಲಿ ನಡೆಯಬಹುದು. ಎಂದರೆ, ಉಪವರ್ಗಗಳಲ್ಲಿ ಯಾವುದನ್ನಾದರೂ ಬಿಟ್ಟರೆ ವಿಭಜನೆಯಲ್ಲಿ '**ಸಂಕುಚಿತ–ವಿಭಜನೆ**'ಯ ದೋಷ ಉಂಟಾಗುತ್ತದೆ. 'ಘನ' ಮತ್ತು 'ದ್ರವ' ವಸ್ತುಗಳನ್ನು ಮಾತ್ರ ಕೊಟ್ಟು 'ಅನಿಲ'ಗಳನ್ನು ಬಿಟ್ಟರೆ, ಭೌತಿಕ ವಸ್ತುಗಳ ವಿಭಜನೆ ಸಂಕುಚಿತವಾಗುತ್ತದೆ.

4. ತಾರ್ಕಿಕ ವಿಭಜನೆಯಲ್ಲಿ ಬರುವ ಎಲ್ಲ ಉಪವರ್ಗಗಳೂ ಒಂದನ್ನೊಂದು ಪರಸ್ಪರ ಬಹಿಷ್ಕರಿಸಬೇಕು (exclusive). ಎಂದರೆ ಒಂದು ಮತ್ತೊಂದರ ಕ್ಷೇತ್ರವನ್ನು ಆಕ್ರಮಿಸಿಕೊಂಡಂತಿರಬಾರದು. ಇದರ ಅರ್ಥವೇನೆಂದರೆ ಯಾವ ವ್ಯಕ್ತಿಯೂ ಒಂದು ವಿಭಜನೆಯಲ್ಲಿ ಒಂದಕ್ಕಿಂತ ಹೆಚ್ಚಿನ ವರ್ಗಕ್ಕೆ ಸೇರಿರಬಾರದು. ಪರಸ್ಪರ ಬಾಹ್ಯ ಉಪವರ್ಗಗಳಿಗೆ ಹೀಗೆ ಉದಾಹರಣೆ ನೀಡಬಹುದು :

ತ್ರಿಕೋನಗಳ ವಿಭಜನೆ–ಸಮಬಾಹು, ದ್ವಿಸಮಬಾಹು ಮತ್ತು ಅಸಮಬಾಹು ತ್ರಿಕೋನಗಳು. ಇವು ಒಂದು ಮತ್ತೊಂದನ್ನು ಬಹಿಷ್ಕರಿಸುತ್ತದೆ. ಒಂದು ತ್ರಿಕೋನ ಒಂದೇ ಸಮಯದಲ್ಲಿ ದ್ವಿಸಮಬಾಹುವೂ ಅಸಮಬಾಹುವೂ ಆಗಿರುವುದಿಲ್ಲ. ಇದನ್ನು ಉಲ್ಲಂಘಿಸಿದರೆ '**ಪರಸ್ಪರ ವ್ಯಾಪಿ**' ಅಥವಾ '**ಮೇಲುಸೇರುವ ವಿಭಜನೆ**' (overlapping division) ಆಗುತ್ತದೆ.

5. ತಾರ್ಕಿಕ ವಿಭಜನೆಯಲ್ಲಿ ವಿಭಜಿತ ಪದದ ಹೆಸರು ಉಪವರ್ಗಗಳಿಗೂ ಸಮಾನವಾಗಿ, ಅದೇ ಅರ್ಥದಲ್ಲಿ, ಸಲ್ಲುವಂತಿರಬೇಕು.

ಉದಾಹರಣೆಗೆ ತ್ರಿಕೋನಗಳ ವಿಭಜನೆಯಲ್ಲಿ ಬರುವ ಉಪವರ್ಗಗಳಲ್ಲಿ ಪ್ರತಿಯೊಂದೂ 'ತ್ರಿಕೋನ'ವೇ.

ಇದರ ಉಲ್ಲಂಘನೆ 'ಭೌತಿಕ' ಅಥವಾ 'ತಾತ್ವಿಕ'-ವಿಭಜನೆಗೆ ಈಡುಮಾಡುತ್ತದೆ.

ಹೀಗೆ 'ತಾರ್ಕಿಕ ವಿಭಜನೆ' ಒಂದು ಪದದ ವಸ್ತು–ವ್ಯಾಪಕತೆಯನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಿಸುವ ಒಂದು ಮಾರ್ಗ. ಈ ಮೇಲಿನ ನಿಯಮಗಳನ್ನು ಅನುಸರಿಸಿ ಮಾಡಿದ ವಿಭಜನೆ 'ತಾರ್ಕಿಕ ವಿಭಜನೆ' ಆಗುತ್ತದೆ. ಆದರೆ ಈ ಕ್ರಮದಲ್ಲಿ ಒಂದು ದುಸ್ತರವಾದ ಅಂಶ ಇರಬಹುದು. ಅದೇನೆಂದರೆ ಮೇಲಿನ ಮೂರನೆಯ ನಿಯಮವನ್ನು ತೃಪ್ತಿಕರವಾಗಿ ಪಾಲಿಸಲು ಆಗದೆ ಹೋಗಬಹುದು. ಎಂದರೆ ಉಪವರ್ಗಗಳೆಲ್ಲಾ

ನಮಗೆ ಗೊತ್ತಾಗದೇ ಹೋಗಬಹುದು. ಅವುಗಳನ್ನು ಸಂಪೂರ್ಣವಾಗಿ ನೀಡದ ಹೊರತು ವಿಭಜನೆ ಪೂರ್ಣವಾಗದೆ '**ಸಂಕುಚಿತ-ವಿಭಜನೆ**'ಯ ದೋಷಕ್ಕೆ ಗುರಿಯಾಗಬಹುದು. ಆದ್ದರಿಂದ ಹಲವು ತಾರ್ಕಿಕರು ಮತ್ತೊಂದು ರೀತಿಯ ವಿಭಜನಾ ವಿಧಾನವನ್ನು ನೀಡಿದ್ದಾರೆ. ಅದನ್ನು '**ದ್ವಿಧಾಕರಣ**' ಅಥವಾ '**ದ್ವಿಭಜನೆ**' (division by dichotomy) ಎನ್ನುತ್ತಾರೆ. ಅದರ ಸ್ವರೂಪವನ್ನು ಸ್ವಲ್ಪ ನೋಡೋಣ.

### ii. 'ದ್ವಿಭಜನೆ'

ಹೆಸರೇ ಸೂಚಿಸುವಂತೆ, ಒಂದು ವರ್ಗಸೂಚಕ ಪದವನ್ನು ಎರಡೇ ಉಪವರ್ಗಗಳಾಗಿ ವಿಭಜನೆ ಮಾಡುವಂತಹ ರೀತಿಯದು. ಆದರೆ ಪ್ರತಿ ಹಂತದಲ್ಲೂ ಒಂದು ಭಾವಾತ್ಮಕವಾಗಿದ್ದು ಮತ್ತೊಂದು ಅದರ ವ್ಯಾಘಾತಕವಾಗಿ, ಎಂದರೆ ನಿಷೇಧಾತ್ಮಕವಾಗಿ ಇರುತ್ತದೆ. ಆದರೆ ಈ ವಿಭಜನೆಯಲ್ಲೂ ಒಂದೇ 'ವಿಭಜನ-ಆಧಾರ'ವನ್ನು ಉಪಯೋಗಿಸಬೇಕಾಗುತ್ತದೆ.

1. ಉದಾಹರಣೆ: **ವಿಭಜಿತ ಪದ: 'ಮಾನವ'**
   **ವಿಭಜನ ಆಧಾರ: 'ಭಾಷೆ'**




ಹೀಗೆ.

2. ಉದಾಹರಣೆ—**ವಿಭಜಿತ ಪದ: 'ಪ್ರಾಣಿ'**
   **ವಿಭಜನ ಆಧಾರ: 'ವನ್ಯ'**




ಹೀಗೆ.

ಈ ರೀತಿಯಲ್ಲಿ 'ದ್ವಿಭಜನೆ' ಎನ್ನುವಂತಹುದು ಒಂದು ರೀತಿಯಲ್ಲಿ ಪದದ ವಸ್ತು ವ್ಯಾಪ್ತಿಯನ್ನು ಪೂರ್ಣಗೊಳಿಸಿದರೂ, ಇದರಲ್ಲೂ ಒಂದು ತೊಡಕು ಇದ್ದೇ ಇದೆ. ನಿಷೇಧಾತ್ಮಕ ಪದ ನಮ್ಮನ್ನು ಅಸ್ಪಷ್ಟತೆಯಲ್ಲೇ ಇರಿಸುತ್ತದೆ. ಅಲ್ಲದೆ ಭಾವಾತ್ಮಕ ದೆಶೆಯಲ್ಲೂ ಮತ್ತೆ ಮತ್ತೆ ವಿವರಗಳು ಬೇಕಾಗಿ ವಿಭಜನೆಯನ್ನು ಮುಂದುವರಿಸಿಕೊಂಡು ಹೋಗಲೇಬೇಕಾಗುತ್ತದೆ. ಆದ್ದರಿಂದ ಅನೇಕ ತಾರ್ಕಿಕರು **'ತಾರ್ಕಿಕ ವಿಭಜನೆ'** ಯನ್ನೇ ಒಪ್ಪಿಕೊಂಡು ಅಲ್ಲಿ ಬರುವ ಉಪವರ್ಗಗಳನ್ನು ಆದಷ್ಟು ಸಮಗ್ರವಾಗಿ ನೀಡುವ ಪ್ರಯತ್ನ ಮಾಡಿದರೆ ಸಾಕು ಎನ್ನುತ್ತಾರೆ. ಮಿಕ್ಕದ್ದು ಏನಾದರೂ ಇದ್ದರೆ "ಇತ್ಯಾದಿ" ಎನ್ನುವ, ಶೇಷಭಾವವನ್ನು ಸೂಚಿಸುವ ಪದವನ್ನು ನೀಡಬಹುದು ಎನ್ನುತ್ತಾರೆ. ಅದರಿಂದ ಅಪೂರ್ಣತ್ವದ ದೋಷ ದೂರವಾಗುವುದೆಂಬ ಆಶ್ವಾಸನೆ ನೀಡುತ್ತಾರೆ.

# ಅಧ್ಯಾಯ 5

# ತಾರ್ಕಿಕ ವಾಕ್ಯ

# Logical Proposition

## 1. ತಾರ್ಕಿಕ ವಾಕ್ಯ ಮತ್ತು ಸಾಮಾನ್ಯ ವಾಕ್ಯ

ತರ್ಕಶಾಸ್ತ್ರದ ಕ್ಷೇತ್ರ ಮತ್ತು ಅದರ ವೈಶಾಲ್ಯವನ್ನು ಕುರಿತು ಹೇಳುವಾಗ ಹೇಗೆ ಈ ಶಾಸ್ತ್ರವು ನಮ್ಮ ವಿಚಾರಗಳ ಅಭಿವ್ಯಕ್ತಿಯ ಕಡೆ ಹೆಚ್ಚಿನ ಗಮನ ಕೊಡುತ್ತದೆಂಬು ದರತ್ತ ಗಮನ ಸೆಳೆದಿದ್ದೇವೆ. ಪ್ರತಿಯೊಂದಕ್ಕೂ ಒಂದು ನಿಯಮಿತ ಆಕಾರ ಅಥವಾ ರೂಪ ಇದ್ದರೆ ಮಾತ್ರ ವಿಚಾರದ ಅಭಿವ್ಯಕ್ತ ಸ್ಪಷ್ಟವಾಗಿ ಇರುತ್ತದೆಂದು ಹೇಳಿದ್ದೇವೆ. ಆ ಸಂದರ್ಭದಲ್ಲಿ ಈ ಅಭಿವ್ಯಕ್ತಿಗೆ ಸಂಬಂಧಪಟ್ಟಂತೆ ಹಲವು ಹಂತಗಳನ್ನು ಗಮನಿಸಿದ್ದೇವೆ.

ಮೊದಲನೆಯದು 'ಸಾಧಾರಣ ಗ್ರಹಣ' (Simple apprehension) ದಿಂದ ಮನಸ್ಸು 'ನಿರ್ಣಯ' ( judgement) ದ ಘಟ್ಟಕ್ಕೆ ಬರುವುದೆಂದೂ, ಅನಂತರ ಬಾಹ್ಯ ರೂಪದ ಶಾಬ್ದಿಕವಾದ 'ತಾರ್ಕಿಕ ವಾಕ್ಯ' (proposition) ವಾಗುವುದೆಂದೂ, ಅನಂತರ ವಿಚಾರದ ವ್ಯಾಪ್ತಿ ಬೆಳೆಯುತ್ತಾ ಬೆಳೆಯುತ್ತಾ 'ಅನುಮಾನ' (inference) ದವರೆಗೂ ಹೋಗಿ ಆಲೋಚನಾಸರಣಿ ರೂಪದಳೆಯುತ್ತದೆಂದೂ ಹೇಳಿದ್ದೇವೆ.

ಈಗ 'ತಾರ್ಕಿಕ ವಾಕ್ಯ'ದ ವಿಚಾರವಾಗಿ ವಿಶೇಷ ಪ್ರಸ್ತಾಪ ಮಾಡಬೇಕಾಗಿದೆ.

ಮೊದಲು 'ನಿರ್ಣಯ'ಕ್ಕೂ ಅದರ ಶಾಬ್ದಿಕ ರೂಪವಾದ ತಾರ್ಕಿಕ ವಾಕ್ಯಕ್ಕೂ ಇರುವ ವ್ಯತ್ಯಾಸವನ್ನು ಮತ್ತೊಮ್ಮೆ ಸ್ಮರಿಸಿಕೊಂಡು ವಿಚಾರವನ್ನು ಮುಂದುವರಿಸೋಣ.

ಯಾವ ನಿರ್ದಿಷ್ಟ ಉದ್ದೇಶವೂ ಇಲ್ಲದೆ ನಮ್ಮ ಮನಸ್ಸು ಸುಮ್ಮನೆ ಯಾವುದನ್ನಾ ದರೂ ಯೋಚಿಸುವ ಸ್ವಭಾವವನ್ನು ಹೊಂದಿರುತ್ತದೆ. ವಿಷಯದಿಂದ ವಿಷಯಕ್ಕೆ ಹೋಗ ಬಹುದು. ವಿಷಯವನ್ನು ಅಸಂಪೂರ್ಣವಾಗಿ ಬಿಡಬಹುದು. ಪಂಚೇಂದ್ರಿಯಗಳ ಗಮನಕ್ಕೆ ಬಂದಂತೆಲ್ಲಾ ನಮ್ಮ ಮನಸ್ಸಿನಲ್ಲಿ ಕಲ್ಪನೆಗಳು ಹುಟ್ಟಬಹುದು, ಅಡಗಬಹುದು. ಹೀಗೆ ಹರಿಯುವ ಚಿಂತನೆಯನ್ನು **'ಸಾಧಾರಣ ಗ್ರಹಣ'** ಎಂದೆನ್ನಬಹುದು. ಆದರೆ ಅನೇಕ ಸಲ ಹಲವೇ ವಿಷಯಗಳನ್ನು ಶ್ರದ್ಧೆಯಿಂದ ಯೋಚಿಸುವುದೂ ಉಂಟು. ಹೀಗೆ ಯೋಚಿಸುವಾಗ ವಿಚಾರವು ವಿಷಯಗಳ ಸುತ್ತೂ ಹರಿದು ಸ್ಪಷ್ಟತೆಯನ್ನು ಹೊಂದುತ್ತದೆ ಮತ್ತು ಆ ವಿಷಯಗಳ ವಿಶ್ಲೇಷಣೆಯನ್ನು ಮಾಡಿ ಹಲವು ಸಂಬಂಧಗಳಲ್ಲಿ, ಅಥವಾ ಸಂಬಂಧಗಳ ಮೂಲಕ ವಿಚಾರಕ್ಕೆ ಒಂದು ನಿರ್ದಿಷ್ಟರೂಪವನ್ನು ನೀಡುತ್ತದೆ. ಉದಾ

ಹರಣೆ, ಬಾಹ್ಯ ವಸ್ತುವೊಂದಾದ 'ಹೂವು'. ಇದರ ಕಡೆ ನಮ್ಮ ಚಿತ್ತ ಹರಿದು, ಇದರ ಬಗ್ಗೆ ಯೋಚನೆಯಲ್ಲಿ ತೊಡಗಿ 'ಹೂವು ಕೆಂಪಗಿದೆ', ಈ ಹೂವು 'ಗುಲಾಬಿ ಹೂವು' ಎನ್ನುವ ಸ್ಥಿತಿಗೆ ಬರಬಹುದು. ಈ ಸ್ಥಿತಿಯಲ್ಲಿ ಹೂವಿನೊಡನೆ ಮತ್ತೊಂದು ವಿಚಾರದ ಸಂಬಂಧ ಬೆಳೆಸಿದ್ದೇವೆ. ಹೂವು ಮತ್ತು ಕೆಂಪು ಇವುಗಳ ಸಂಬಂಧ; ಹೂವು ಮತ್ತು ಗುಲಾಬಿ ಇವುಗಳ ಸಂಬಂಧ. ಈ ಸಂಬಂಧ ಮೇಲಿರುವಂತೆ ಭಾವಾತ್ಮಕವಾಗಿಯೂ ಇರಬಹುದು ಅಥವಾ ನಿಷೇಧಾತ್ಮಕವಾಗಿಯೂ ಇರಬಹುದು—'ಹೂವು ಕೆಂಪಗಿಲ್ಲ' 'ಈ ಹೂವು ಗುಲಾಬಿಯಲ್ಲ' ಹೀಗೆ. ಇಲ್ಲಿಯೂ ಕೂಡ ಎರಡು ಕಲ್ಪನೆಗಳ ಸಂಬಂಧ ಬೆಳೆದಿದೆ. ಹೀಗೆ ಮಾನಸಿಕ ಮೌಲ್ಯದಲ್ಲಿ ವಿಚಾರವು ಒಂದು ವಸ್ತುವಿನ ಬಗ್ಗೆ ಅಥವಾ ವಿಷಯದ ಬಗ್ಗೆ ಭಾವಾತ್ಮಕವಾಗಿ ಅಥವಾ ನಿಷೇಧಾತ್ಮಕವಾಗಿ ಸಂಬಂಧ ಕಲ್ಪನೆಗಳನ್ನು ಮಾಡುವ ಮೂಲಕ ಯೋಚನೆಗೆ ಒಂದು ಸ್ಪಷ್ಟ ರೂಪವನ್ನು ಕೊಟ್ಟರೆ ಅದಕ್ಕೆ 'ನಿರ್ಣಯ' ಎನ್ನುತ್ತಾರೆ. ಎಂದರೆ ಇಲ್ಲಿ ಒಂದು ವಿಷಯದ ಬಗ್ಗೆ ಮನಸ್ಸು ಸುಮ್ಮನೆ ಒಂದು ಆಲೋಚನಾ ಲಹರಿಯಲ್ಲಿ ತೊಡಗದೆ ಒಂದು 'ನಿರ್ಣಯದ' ಮಟ್ಟಕ್ಕೆ ಬಂದಿರುತ್ತದೆ. ಈ ನಿರ್ಣಯದ ಗುರುತು ಅದು ನೀಡುವ ಭಾವಾತ್ಮಕ ಅಥವಾ ನಿಷೇಧಾತ್ಮಕ ಸಂಬಂಧದಲ್ಲಿ ಅಡಗಿರುತ್ತದೆ.

ಈ ಮಟ್ಟದಲ್ಲಿ ವಿಚಾರ ಕೇವಲ ಮಾನಸಿಕ ಮಟ್ಟದಲ್ಲೇ ಇದ್ದು, ಶಾಬ್ದಿಕವಾಗಿ ವ್ಯಕ್ತವಾಗಿರುವುದಿಲ್ಲ. ಅದನ್ನು ಭಾಷೆಯ ರೂಪದಲ್ಲಿ ವ್ಯಕ್ತ ಮಾಡುವಾಗ ವ್ಯಾಕರಣವು ಅದನ್ನು 'ವಾಕ್ಯ' ಎನ್ನುತ್ತದೆ. ಅದಕ್ಕೊಂದು ನಿಶ್ಚಿತ ರೂಪವನ್ನು ಕೊಟ್ಟ ತರ್ಕವು ಅದನ್ನೇ 'ತಾರ್ಕಿಕ ವಾಕ್ಯ' ಎನ್ನುತ್ತದೆ.

'ನಿರ್ಣಯ'ಕ್ಕೂ 'ವಾಕ್ಯ'ಕ್ಕೂ 'ತಾರ್ಕಿಕ ವಾಕ್ಯ'ಕ್ಕೂ ವ್ಯತ್ಯಾಸವೇನೆಂದರೆ ಮೊದಲನೆಯದು ಅನಭಿವ್ಯಕ್ತ ವಿಚಾರವಾದರೆ, ವಾಕ್ಯ ಮತ್ತು ತಾರ್ಕಿಕ ವಾಕ್ಯಗಳು ಶಬ್ದ ರೂಪದ ಅಭಿವ್ಯಕ್ತ ರೂಪಗಳು. ವಸ್ತುವೊಂದೇ, ಅಭಿವ್ಯಕ್ತಿಯಲ್ಲಿ ಮಾತ್ರ ವ್ಯತ್ಯಾಸ.

ಆದರೆ 'ವಾಕ್ಯ'ಕ್ಕೂ 'ತಾರ್ಕಿಕ ವಾಕ್ಯ'ಕ್ಕೂ ವ್ಯತ್ಯಾಸವಿದೆ. ತರ್ಕದ ದೃಷ್ಟಿಯಲ್ಲಿ ಎಲ್ಲ ವಾಕ್ಯಗಳೂ ವಿಚಾರದ ಅಭಿವ್ಯಕ್ತಿಯ ಬಗ್ಗೆ ಸ್ಫುಟವಾಗಿರುವುದಿಲ್ಲ. ವಾಕ್ಯ ವ್ಯಂಗ್ಯಾರ್ಥ ಅಥವಾ ಸಂಜ್ಞಾರ್ಥವನ್ನು ನೀಡುತ್ತದೆನ್ನುವುದನ್ನು ನಾವು ಬಲ್ಲೆವು. ಇವೆಲ್ಲವೂ ತರ್ಕದ ದೃಷ್ಟಿಯಿಂದ ವಿಚಾರದ ನಿಶ್ಚಿತ ಅಭಿವ್ಯಕ್ತಿಗೆ ತೊಡಕುಗಳು. ಆದ್ದರಿಂದ ಅತ್ಯಲ್ಪ ಪ್ರಮಾಣದಲ್ಲಿ ಹೇಳಬೇಕಾದ ವಿಚಾರವನ್ನು ಎಷ್ಟು ಚೊಕ್ಕವಾಗಿ ಸ್ಪಷ್ಟವಾಗಿ ಮಾಡಬಹುದೆಂದು ತರ್ಕವು ಯೋಚಿಸಿ 'ತಾರ್ಕಿಕ ವಾಕ್ಯ'ದ ಸ್ವರೂಪವನ್ನು ತಿಳಿಸುತ್ತದೆ. ವ್ಯಾಕರಣದಲ್ಲಿ ಕೇವಲ ಕರ್ತೃ, ಕ್ರಿಯಾ, ಕರ್ಮ (subject, verb, object) ಎನ್ನುವ ಮೂರು ಶಬ್ದಗಳಲ್ಲೇ ವಾಕ್ಯವನ್ನು ಹೇಳುವುದಾದರೂ, ವ್ಯಾಕರಣ

ಸೂತ್ರದ ದೃಷ್ಟಿ ಭಾಷೆಯ ರಚನೆಯಲ್ಲೇ ಇರುವುದರಿಂದ, ಆ ವಾಕ್ಯದ ಬಂಧ ಮುಖ್ಯ ವಾಗುವುದೇ ಹೊರತು ಅದರ ಅರ್ಥವಲ್ಲ. ಆದರೆ ತರ್ಕವು ವಾಕ್ಯಬಂಧದ ಜೊತೆ ವಿಷಯ ಮತ್ತು ಅದರ ಅರ್ಥವನ್ನು ಗಮನಿಸುವುದರಿಂದ, ವಾಕ್ಯರಚನೆಯಲ್ಲಿ ಸ್ವಲ್ಪ ವ್ಯತ್ಯಾಸಗಳನ್ನು ಮಾಡಿಕೊಂಡು ಮಾನಸಿಕವಾದ 'ನಿರ್ಣಯ'ವನ್ನು ಶಬ್ದ ರೂಪದಲ್ಲಿ ವ್ಯಕ್ತ ಮಾಡುತ್ತದೆ. ಅಲ್ಲದೆ ವ್ಯಾಕರಣವು ಉಲ್ಲೇಖಿಸುವ 'ಭಾಷೆಯ ಅಂಗಗಳನ್ನು' ತರ್ಕವು ಒಪ್ಪದೆ, ತಾರ್ಕಿಕ ವಾಕ್ಯವು ಕೇವಲ ನಾಲ್ಕು ರೂಪದಲ್ಲಿರಬಹುದೆಂದು ತೀರ್ಮಾ ನಿಸುತ್ತದೆ. ಎಲ್ಲ ವ್ಯಾಕರಣ ಅಥವಾ ಭಾಷೆಯ ಸಾಮಾನ್ಯ ವಾಕ್ಯಗಳನ್ನು ಈ ನಾಲ್ಕು ರೀತಿಯ ತಾರ್ಕಿಕ ವಾಕ್ಯಗಳಿಗೇ ಪರಿವರ್ತಿಸಬೇಕು ಎಂದು ನಿಯೋಜಿಸುತ್ತದೆ.

ತರ್ಕವು ಹೇಳುವ ಈ ನಾಲ್ಕು ರೀತಿಯ ತಾರ್ಕಿಕ ವಾಕ್ಯರೂಪಗಳಾವುವು ಇದನ್ನು ನೋಡೋಣ. ಮೊದಲು ಒಂದು ತಾರ್ಕಿಕ ವಾಕ್ಯದ ರಚನೆ ಹೇಗಿರುವುದೆಂಬ ದನ್ನು ತಿಳಿಯೋಣ.

## 2. ತಾರ್ಕಿಕ ವಾಕ್ಯದ ರಚನೆ—ಅದರ ನಾಲ್ಕು ಅಂಗಗಳು

ನಮ್ಮ ಮಾನಸಿಕ ನಿರ್ಣಯ ಯಾವುದೋ ವಸ್ತುವನ್ನು ಕುರಿತದ್ದಾಗಿರುತ್ತದೆ. ಇದನ್ನು ವ್ಯಕ್ತಮಾಡುವ ಪದ '**ಉದ್ದೇಶ್ಯಪದ**' ಎನಿಸುತ್ತದೆ. ಇದರ ವಿಚಾರವಾಗಿ ಏನನ್ನು ನಿರ್ಣಯದಲ್ಲಿ ಹೇಳಬಯಸುತ್ತೇವೋ ಅದನ್ನು ವ್ಯಕ್ತಮಾಡುವ ಪದ '**ವಿಧೇಯ ಪದ**' ಎನಿಸುತ್ತದೆ. ಕೇವಲ ಈ ಎರಡೂ ಪದಗಳಿದ್ದರೆ ಅವುಗಳ ಸಂಬಂಧ ಹೇಗೆ ಎನ್ನು ವುದು ತಿಳಿಯುವುದಿಲ್ಲ. ಅಲ್ಲದೆ ಆ ಸಂಬಂಧ ಭಾವಾತ್ಮಕವೋ ಅಥವಾ ನಿಷೇಧಾತ್ಮಕವೋ ಎನ್ನುವುದು ವ್ಯಕ್ತವಾಗದ ಹೊರತು ತಿಳಿಯುವುದಿಲ್ಲ. ಅದನ್ನು ಸೂಚಿಸುವ ಪದ ಕ್ರಿಯಾಪದದ ಒಂದು ರೀತಿಯಲ್ಲಿರುತ್ತದೆ. ಇದನ್ನು '**ಸಂಯೋಗಿಕ**' ಅಥವಾ '**ಸಂಯೋಜಕ**' ಶಬ್ದ ಎನ್ನುತ್ತಾರೆ.

ಉದಾಹರಣೆಗೆ 'ಮಾನವರು' 'ಮರ್ತ್ಯರು' ಇವು ಕ್ರಮವಾಗಿ ಉದ್ದೇಶ್ಯಪದ ಮತ್ತು ವಿಧೇಯ ಪದಗಳು. ಇವುಗಳ ಸಂಬಂಧವನ್ನು ಸೂಚಿಸಬೇಕಾದರೆ "ಮಾನವರು ಮರ್ತ್ಯರಾಗಿದ್ದಾರೆ.' ಇಲ್ಲಿ 'ಆಗಿರುವಿಕೆ' ವ್ಯಾಕರಣದಲ್ಲಿದ್ದಂತೆ ಕರ್ಮಪದವೇ ಆಗಿರದೆ ಸಂಯೋಜಕ ಪದವೂ ಆಗಿರುತ್ತದೆ.

ಆದರೆ ಮತ್ತೊಂದು ಪ್ರಶ್ನೆ ಬರಬಹುದು. ವಿಧೇಯಪದದ ಎಷ್ಟು ಅಂಶ ಉದ್ದೇಶ್ಯ ಪದಕ್ಕೆ ಅನ್ವಯವಾಗುತ್ತದೆ, ಅಥವಾ ಉದ್ದೇಶ್ಯಪದದ ಎಷ್ಟು ಅಂಶಕ್ಕೆ ವಿಧೇಯಪದದ ಸಂಬಂಧವಿದೆ, ಎನ್ನುವ ಪ್ರಶ್ನೆ. ಹಲವು ಸಲ ಇದನ್ನು ವ್ಯಕ್ತಮಾಡದಿದ್ದರೆ ಅರ್ಥದ ದೃಷ್ಟಿ ಯಿಂದ ವಾಕ್ಯ ಪೂರ್ಣವಾಗುವುದಿಲ್ಲ. ಆದ್ದರಿಂದ ತರ್ಕವು ತಾರ್ಕಿಕ ವಾಕ್ಯದಲ್ಲಿ ಈ

ಅಂಶವೂ ಸೂಚಿತವಾಗಿರಬೇಕು ಎನ್ನುತ್ತದೆ. ವಾಕ್ಯದ ಈ ಭಾಗಕ್ಕೆ **'ಪ್ರಮಾಣ-ಸೂಚಕ ಪದ'** ಎಂದು ಹೆಸರು. ಇದನ್ನು ಕೂಡಿಸಿಕೊಂಡು ಹೇಳುವಾಗ ಮೇಲಿನ ವಾಕ್ಯ ಈ ರೂಪವನ್ನು ತಾಳುತ್ತದೆ. "ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ"

| All | men | are | mortal |
|---|---|---|---|
| sign of quantity | subject | copula | predicate |

ಇಂಗ್ಲಿಷ್ ಭಾಷೆಯಲ್ಲಿ ತಾರ್ಕಿಕ ವಾಕ್ಯವನ್ನು ಹೇಳುವಾಗ ಇದೇ ಕ್ರಮದಲ್ಲಿಯೇ ಎಂದರೆ ಮೊದಲು ಪ್ರಮಾಣಸೂಚಕ ಪದ, ಎರಡನೆಯದಾಗಿ ಉದ್ದೇಶ್ಯಪದ, ಮೂರನೆಯದು ಸಂಯೋಗಿಕ ಪದ ಮತ್ತು ನಾಲ್ಕನೆಯದು ವಿಧೇಯಪದಗಳು ಬರಬೇಕು ಎನ್ನುತ್ತಾರೆ. ಆದರೆ ಇದೇ ಕ್ರಮದಲ್ಲಿ ಕನ್ನಡ ಭಾಷೆಯಲ್ಲೂ ಹೇಳಬೇಕೆಂದರೆ ಸ್ವಲ್ಪ ವಿಚಿತ್ರವಾಗಿ ಕಾಣಬಹುದು.

| ಎಲ್ಲ | ಮಾನವರೂ | ಇದ್ದಾರೆ | ಮರ್ತ್ಯರಾಗಿ |
|---|---|---|---|
| ಪ್ರಮಾಣಸೂಚಕ | ಉದ್ದೇಶ್ಯಪದ | ಸಂಯೋಗಿಕ ಪದ | ವಿಧೇಯಪದ |

ಆದ್ದರಿಂದ ಇದರ ಭಾವವನ್ನು ಗ್ರಹಿಸಿಕೊಂಡು ನಾವು ಕನ್ನಡದಲ್ಲಿ ಹೇಳಬೇಕಾದರೆ ಈ ಕ್ರಮವನ್ನು ನಮ್ಮ ಭಾಷೆಯ ರೀತ್ಯಾ (ಆದರೆ ತಾರ್ಕಿಕ ವಾಕ್ಯದ ಯಾವ ಅಂಗಗಳನ್ನೂ ಬಿಡದೆ) ಹೇಳಿದರೆ ಸಾಕು, ಎಂದರೆ

'ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ' ಎಂದು ಹೇಳಿದರೆ ಸಾಕು.

## 3. ತಾರ್ಕಿಕ ವಾಕ್ಯದ ರೂಪಗಳು

ಒಂದು ತಾರ್ಕಿಕ ವಾಕ್ಯದಲ್ಲಿ ಬರುವ ವಿಧೇಯಪದವು ಉದ್ದೇಶ್ಯಪದದೊಂದಿಗೆ ಯಾವ ತರಹೆಯ ಸಂಬಂಧವನ್ನು ಹೊಂದಿದೆ ಎನ್ನುವುದನ್ನು ಗಮನಿಸಿ ತಾರ್ಕಿಕ ವಾಕ್ಯಗಳಲ್ಲಿ ಎರಡು ರೂಪಗಳನ್ನು ಕಾಣಬಹುದು. ಎಂದರೆ ಅವುಗಳ ಸಂಬಂಧ ಭಾವಾತ್ಮಕವೋ ಅಥವಾ ನಿಷೇಧಾತ್ಮಕವೋ ಎನ್ನುವ ವಿಚಾರ ವಾಕ್ಯದ **'ಗುಣ'**ವನ್ನು ನಿರ್ದೇಶಿಸುತ್ತದೆ. ಎಂದರೆ ತಾರ್ಕಿಕ ವಾಕ್ಯವು

a. ಭಾವಾತ್ಮಕ ಮತ್ತು
b. ನಿಷೇಧಾತ್ಮಕ ಎಂದು ಎರಡು ವಿಧ.

ಉದಾ : ಹೂವುಗಳು ಕೆಂಪಗಿವೆ (ಭಾವಾತ್ಮಕ)
ಹೂವುಗಳು ಕೆಂಪಗಿಲ್ಲ (ನಿಷೇಧಾತ್ಮಕ)

ಇದನ್ನು ಸೂಚಿಸುವ ಭಾಗ ಸಂಯೋಗಿಕ ಪದದಲ್ಲಿರುತ್ತದೆ: 'ಇವೆ', 'ಇಲ್ಲ', 'ಆಗಿವೆ', 'ಆಗಿಲ್ಲ'. 'ಇರು' 'ಆಗು' ಎನ್ನುವ ಧಾತು ಅಥವಾ ಕ್ರಿಯಾಪದದಿಂದ ಇದನ್ನು ಗಮನಿಸಬೇಕು.

ಈ ಸಂಯೋಗಿಕ ಕ್ರಿಯಾಪದವು ಕೇವಲ **ವರ್ತಮಾನ ಕಾಲ** (present tense) ದಲ್ಲೇ ಇರಬೇಕೆಂದು ತರ್ಕ ವಿಧಿಸುತ್ತದೆ. ಉದ್ದೇಶ್ಯತರಹ ವಚನವನ್ನು ಅನುಸರಿಸಿ ಸಂಯೋಗಿಕ ಪದವು ಬಹುವಚನ ಅಥವಾ ಏಕವಚನದಲ್ಲಿ ಇರಬಹುದು. ಉದಾಹರಣೆಗೆ 'ಆಗಿವೆ' ಅಥವಾ 'ಆಗಿದೆ' ಎಂದರೆ ಭೂತ ಮತ್ತು ಭವಿಷ್ಯತ್ತು ಕಾಲಗಳನ್ನು ಸೂಚಿಸುವ ಕ್ರಿಯಾ ರೂಪಗಳಲ್ಲಿ ಸಂಯೋಗಕ ಪದಗಳನ್ನು ಬಳಸಬಾರದು. ಸಾಮಾನ್ಯ ಭಾಷೆಯಲ್ಲಿ ಬರುವ ಎಲ್ಲ ಕ್ರಿಯಾರೂಪಗಳನ್ನು ವರ್ತಮಾನಕಾಲದ ಕ್ರಿಯಾರೂಪಕ್ಕೇ ಪರಿವರ್ತಿಸಬೇಕೆಂದು ತರ್ಕ ವಿಧಿಸುತ್ತದೆ.

ಹಾಗೆಯೇ ವಿಧೇಯ ಪದದ ಎಷ್ಟು ಅಂಶ ಉದ್ದೇಶ್ಯಪದಕ್ಕೆ ಅನ್ವಯವಾಗುತ್ತದೆ ಎನ್ನುವ ವ್ಯಾಪ್ತಿ ಅಥವಾ ಪ್ರಮಾಣವನ್ನು ಅನುಸರಿಸಿ ತಾರ್ಕಿಕ ವಾಕ್ಯಗಳು ಎರಡು ರೂಪವನ್ನು ತಾಳಬಹುದು ಎಂದರೆ ಹಲವು ಸಲ ಉದ್ದೇಶ್ಯ ಪದದ ಎಲ್ಲ ವ್ಯಕ್ತಿ ಅಥವಾ ಅಂಶಗಳಿಗೂ ವಿಧೇಯಪದ ಅನ್ವಯವಾಗಬಹುದು. ಹೀಗಿದ್ದರೆ ಅದು '**ಪೂರ್ಣ ವ್ಯಾಪಕ**'ಉದ್ದೇಶ್ಯಪದವಾಗುತ್ತದೆ. ಅಂತಹ ಉದ್ದೇಶ್ಯ ಪದವನ್ನು ಒಳಗೊಂಡ ತಾರ್ಕಿಕ ವಾಕ್ಯ '**ಪೂರ್ಣವ್ಯಾಪಕ ತಾರ್ಕಿಕವಾಕ್ಯ**' ಆಗುತ್ತದೆ. ಇದನ್ನು ವಾಕ್ಯದಲ್ಲಿನ ಪ್ರಮಾಣ-ಸೂಚಕಪದ "ಎಲ್ಲ" ಎನ್ನುವ ಶಬ್ದದಿಂದ ತೋರಿಸುತ್ತದೆ. ಹಲವು ಸಲ ಉದ್ದೇಶ್ಯಪದದ ಹಲವು ವ್ಯಕ್ತಿ ಅಥವಾ ಅಂಶಗಳಿಗೆ ವಿಧೇಯಪದ ಅನ್ವಯವಾಗಿದ್ದರೆ ಅದಕ್ಕೆ '**ಅಪೂರ್ಣವ್ಯಾಪಕ**' ಉದ್ದೇಶ್ಯಪದವಾಗುತ್ತದೆ. ಅದನ್ನು ಒಳಗೊಂಡ ತಾರ್ಕಿಕ ವಾಕ್ಯ '**ಅಪೂರ್ಣವ್ಯಾಪಕ ತಾರ್ಕಿಕ ವಾಕ್ಯ**' ಎಂದೆನಿಸುತ್ತದೆ. ಇದನ್ನು '**ಹಲವು**' ಎನ್ನುವ ಶಬ್ದದಿಂದ ಪ್ರಮಾಣ-ಸೂಚಕಪದ ಸೂಚಿಸುತ್ತದೆ.

ಹೀಗೆ ತಾರ್ಕಿಕ ವಾಕ್ಯಗಳಲ್ಲಿ '**ಗುಣ**' ದ ದೃಷ್ಟಿಯಿಂದ ಎರಡು ರೀತಿ, ವ್ಯಾಪ್ತಿಯ ದೃಷ್ಟಿಯಿಂದ ಎರಡು ರೀತಿಯಲ್ಲಿರುತ್ತವೆ. ಈ ಎರಡನ್ನೂ ಕೂಡಿಸಿದರೆ ತಾರ್ಕಿಕ ವಾಕ್ಯಗಳಲ್ಲಿ ನಾಲ್ಕು ರೂಪಗಳು ಬರುತ್ತವೆ.

a. **ಗುಣಸೂಚಕ :** 'ಭಾವಾತ್ಮಕ', 'ನಿಷೇಧಾತ್ಮಕ'
b. **ವ್ಯಾಪ್ತಿಸೂಚಕ :** 'ಪೂರ್ಣವ್ಯಾಪಕ', 'ಅಪೂರ್ಣವ್ಯಾಪಕ'

ಗುಣ ಮತ್ತು ವ್ಯಾಪ್ತಿಗಳನ್ನು ಒಂದೇ ತಾರ್ಕಿಕ ವಾಕ್ಯದಲ್ಲಿ ಕೂಡಿಸಬಹುದಾದ್ದರಿಂದ ಈ ಕೆಳಗಿನ ರೂಪಗಳು ಬರುತ್ತವೆ.

a. ಪೂರ್ಣವ್ಯಾಪಕ ಭಾವಾತ್ಮಕ
b. ಪೂರ್ಣವ್ಯಾಪಕ ನಿಷೇಧಾತ್ಮಕ
c. ಅಪೂರ್ಣವ್ಯಾಪಕ ಭಾವಾತ್ಮಕ
d. ಅಪೂರ್ಣ ವ್ಯಾಪಕ ನಿಷೇಧಾತ್ಮಕ

ಈ ಎಲ್ಲದಕ್ಕೂ ಉದಾಹರಣೆಗಳನ್ನು ಹೀಗೆ ನೀಡಬಹುದು.

a. ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ.—ಪೂ.ಭಾ.
b. ಹಲವು ಮಾನವರು ಕನ್ನಡಿಗರು—ಅ.ಪೂ.ಭಾ.
c. ಯಾವ ಮಾನವನೂ ಅಮರನಲ್ಲ—ಪೂ. ನಿ.
d. ಹಲವು ಪ್ರಾಣಿಗಳು ಕ್ರೂರಿಗಳಲ್ಲ—ಅ.ಪೂ.ನಿ.

ಇವುಗಳನ್ನು ಸಂಜ್ಞಾತ್ಮಕವಾಗಿ ನೆನಪಿನಲ್ಲಿಡಲು ಸುಲಭವಾಗಿರಲು ಹೀಗೆ ಹೇಳುತ್ತಾರೆ.

1. ಪೂರ್ಣವ್ಯಾಪಕ ಭಾವಾತ್ಮಕ—'A' (ಎಲ್ಲ S — P) (SaP)
2. ಅಪೂರ್ಣವ್ಯಾಪಕ ಭಾವಾತ್ಮಕ—'I' (ಕೆಲವು S — P) (SiP)
3. ಪೂರ್ಣವ್ಯಾಪಕ ನಿಷೇಧಾತ್ಮಕ—'E' (ಯಾವೊಂದು S — P ಅಲ್ಲ (SeP)
4. ಅಪೂರ್ಣವ್ಯಾಪಕ ನಿಷೇಧಾತ್ಮಕ —'O' (ಕೆಲವು S — P ಅಲ್ಲ) (SoP)

ಭಾಷೆಯಲ್ಲಿ ಬರುವ ಎಲ್ಲ ವಾಕ್ಯಗಳನ್ನು ಈ ನಾಲ್ಕು ರೀತಿಯ ವಾಕ್ಯಗಳಿಗೆ ಪರಿವರ್ತಿಸಿದರೆ ಅರ್ಥ ಸ್ಫುಟವಾಗುವುದೊಂದೇ ಅಲ್ಲದೆ ಸುಲಭಗ್ರಾಹ್ಯವೂ ಆಗುತ್ತದೆಂದು ತರ್ಕ ಹೇಳುತ್ತದೆ.

## 4. ತಾರ್ಕಿಕ ವಾಕ್ಯದ ಇತರ ರೂಪಗಳು

ಇಲ್ಲಿ ನೀಡಲಾಗಿರುವ ನಾಲ್ಕು ಬಗೆಯ ತಾರ್ಕಿಕ ವಾಕ್ಯಗಳಲ್ಲಿ ಒಂದು ಮುಖ್ಯ ಲಕ್ಷಣವನ್ನು ನಾವು ಗಮನಿಸಬಹುದು. ಅದೇನೆಂದರೆ ಒಂದು ವಾಕ್ಯವು ಗುಣದಲ್ಲಿ ಭಾವಾತ್ಮಕವಾಗಿರಲಿ ನಿಷೇಧಾತ್ಮಕವಾಗಿರಲಿ ವ್ಯಾಪ್ತಿಯಲ್ಲಿ ಪೂರ್ಣವಾಗಿರಲಿ, ಅಪೂರ್ಣವಾಗಿರಲೀ, ವಿಷಯ ಪ್ರತಿಪಾದನೆಯಲ್ಲಿ **ಅಸಂದಿಗ್ಧವಾಗಿ, ಯಾವ ನಿಯಮಗಳಿಗೂ ಒಳಪಡದೆ, ನೇರವಾಗಿ, ಖಚಿತವಾಗಿ** ಅಭಿಪ್ರಾಯ ನೀಡುತ್ತದೆ. ಎಂದರೆ ಹೇಳುವುದರಲ್ಲಿ ಯಾವ ಸಂಶಯವೂ ಬರುವುದಿಲ್ಲ. ಪರ್ಯಾಯಗಳನ್ನು ಸೂಚಿಸು

ವುದಿಲ್ಲ. ಈ ಕೆಳಗಿನ ಉದಾಹರಣೆಗಳಲ್ಲಿ ಇದನ್ನು ಗಮನಿಸಬಹುದು.

1. ಎಲ್ಲ ಭಾರತೀಯರೂ ಸ್ವಾತಂತ್ರ್ಯಪ್ರಿಯರಾಗಿದ್ದಾರೆ. — A
2. ಹಲವು ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದಾರೆ. — I
3. ಯಾವ ಮಾನವನೂ ಗಾಳಿಯಿಂದ ಜೀವಿಸಲಾರ. —E
4. ಹಲವು ಪ್ರಾಣಿಗಳು ಕಾಡಿನಲ್ಲಿ ಜೀವಿಸುವುದಿಲ್ಲ. —O

ಇಂತಹ ಖಚಿತ, ನಿಯಮರಹಿತ, ಅಸಂದಿಗ್ಧ ತಾರ್ಕಿಕ ವಾಕ್ಯಗಳಿಗೆ 'ನಿರಪೇ **ತಾರ್ಕಿಕ ವಾಕ್ಯ** (categorical) ಗಳೆಂದು ತರ್ಕ ಹೇಳುತ್ತದೆ. ಎಂದರೆ 'ನಿರಪೇ ತಾರ್ಕಿಕ' ವಾಕ್ಯಗಳಲ್ಲಿ ಈ ಮೇಲಿನ ನಾಲ್ಕು ರೂಪಗಳಿವೆ.

ಆದರೆ ತರ್ಕಶಾಸ್ತ್ರದಲ್ಲಿ ಮತ್ತೂ ಎರಡು **ಸಾಪೇಕ್ಷ** (conditional) ರೂ ಗಳನ್ನು ಅಂಗೀಕರಿಸಲಾಗಿದೆ. ಅವುಗಳು

a. ನಿಯಮಾತ್ಮಕ[1] (Hyphothetical)
b. ಪರ್ಯಾಯಾತ್ಮಕ (Disjunctive) ರೂಪಗಳು.

ಉದಾ : a. ನಾವು ಮಾನವರಾಗಿದ್ದರೆ, ಮರ್ತ್ಯರಾಗಿರುತ್ತೇವೆ (ನಿಯಮಾತ್ಮ
b. ಮಾನವರು ಮರ್ತ್ಯರು ಅಥವಾ ಅಮರರು. (ಪರ್ಯಾಯಾತ್ಮ

ಹೀಗೆ ನಮ್ಮ ಮಾನಸಿಕ ಕ್ಷೇತ್ರದ 'ನಿರ್ಣಯ'ವನ್ನು ಯಾವ 'ರೂಪ'ದಲ್ಲಿ ಅ ವ್ಯಕ್ತಗೊಳಿಸುತ್ತೇವೆಂಬುದನ್ನು ಹಿಡಿದು ತಾರ್ಕಿಕ ವಾಕ್ಯಗಳು ಮೂರು ಬಗೆಯಲ್ಲಿರುತ್ತ

(a) ನಿರಪೇಕ್ಷ (b) ನಿಯಮಾತ್ಮಕ ಮತ್ತು (c) ಪರ್ಯಾಯಾತ್ಮಕ.

ಈ ಮೂರರಲ್ಲಿ ಮೊದಲನೆಯದು ಯಾವ ನಿಯಮವನ್ನೂ ಹೇಳದ ಕಾರ ಆದಕ್ಕೆ '**ನಿಯಮರಹಿತ**' (unconditional) ತಾರ್ಕಿಕ ವಾಕ್ಯ ಎನ್ನುತ್ತೇವೆ. ಆ ಉಳಿದ ಎರಡೂ ಒಂದು ಬಗೆಯ ನಿಯಮವನ್ನು ಸೂಚಿಸುವುದರಿಂದ ಅವುಗಳನ '**ಸಾಪೇಕ್ಷ**' (conditional) ವಾಕ್ಯಗಳೆಂದು ಕರೆಯುತ್ತೇವೆ. ಇವು 'ಸಾಪೇಕ್ಷ ಹೇಗೆಂದರೆ, ಅವುಗಳಲ್ಲಿ ವ್ಯಕ್ತವಾಗಿರುವ ಅರ್ಥ ಯಾವುದೋ ಉಪಾಧಿಯ ಮೇ ನಿಂತಿರುತ್ತದೆ.

ಉದಾಹರಣೆಗೆ—

(a) "ಮಾನವನಾಗಿದ್ದರೆ, ಮರ್ತ್ಯರು" ಎಂದರೆ ಮಾನವನಾಗದಿದ್ದರೆ, "ಮತ ರಲ್ಲ" ಎಂದರ್ಥ. ಈ ವಾಕ್ಯದಲ್ಲಿನ ಪೂರ್ವಭಾಗ ಆದರ ಉತ್ತರ ಭಾಗ

---

1. ಇದನ್ನು 'ಕಾಲ್ಪನಿಕ' ಅಥವಾ 'ಔಪಾಧಿಕ'ವೆಂದೂ ಕರೆಯಬಹುದು.

ಅರ್ಥವನ್ನು ನಿರ್ಣಯಿಸುತ್ತವೆ. ಇವುಗಳ ಸಂಬಂಧ ಕಾರಣ-ಕಾರ್ಯಗಳಂತೆ. ಕಾರಣವಿದ್ದರೆ, ಕಾರ್ಯ. ಕಾರಣದ ಅಭಾವದಲ್ಲಿ ಕಾರ್ಯವು ಇರುವುದಿಲ್ಲ. ಹೀಗೆ ಈ ವಾಕ್ಯದ ಅರ್ಥ ಸಾಪೇಕ್ಷವಾಗಿರುತ್ತದೆ.

(b) "ಮಾನವರು ಮರ್ತ್ಯರು ಅಥವಾ ಅಸುರರು" ಇಲ್ಲಿ ಮಾನವರು ಒಂದೇ ಅರ್ಥದಲ್ಲಿ ಮರ್ತ್ಯರೂ ಅಮರ್ತ್ಯರೂ ಆಗುವುದಿಲ್ಲ. ಯಾವುದಾದರೂ ಒಂದು ಮಾನವನಿಗೆ ಅನ್ವಯವಾಗುತ್ತದೆ. ಎಂದರೆ ಇಲ್ಲಿಯೂ ಕೂಡ ಒಂದು ನಿಬಂಧನೆಗೆ ಒಳಪಟ್ಟು ಅರ್ಥ ನಿಂತಿರುತ್ತದೆ.

ಈ ರೀತಿಯಿಂದ ಈ ರೂಪದ ಎರಡು ವಾಕ್ಯಗಳೂ '**ಸಾಪೇಕ್ಷ ತಾರ್ಕಿಕ ವಾಕ್ಯ**ಳೆಂದು ಹೇಳಲ್ಪಟ್ಟಿವೆ.

ಆದರೆ ತರ್ಕಶಾಸ್ತ್ರವು 'ನಿರಪೇಕ್ಷ' ಅಥವಾ 'ನಿಯಮರಹಿತ' ತಾರ್ಕಿಕ ವಾಕ್ಯ ಪವನ್ನೇ ಅನುಮೋದಿಸುತ್ತದೆ. ಅರ್ಥದ ಸ್ಪಷ್ಟ ಅಭಿವ್ಯಕ್ತಿಯ ದೃಷ್ಟಿಯಿಂದ ಈ ನುಮೋದನೆ ಸಹಜವೇ. ಎಲ್ಲ ರೀತಿಯ ಸಾಮಾನ್ಯ ವಾಕ್ಯಗಳನ್ನೂ, ಈ ಸಾಪೇಕ್ಷ ಕ್ಯಗಳನ್ನೂ 'ನಿರಪೇಕ್ಷ' ವಾಕ್ಯಗಳಿಗೇ ಪರಿವರ್ತನೆ ಮಾಡಬೇಕೆಂದು ತರ್ಕಶಾಸ್ತ್ರ ಳುತ್ತದೆ. ಇದಕ್ಕೆ ನಾನಾ ಸಲಹೆಯನ್ನೂ ನೀಡುತ್ತದೆ.

## . ಸಾಮಾನ್ಯ ವಾಕ್ಯಗಳನ್ನು ತಾರ್ಕಿಕ ವಾಕ್ಯ ರೂಪಗಳಿಗೆ ಪರಿವರ್ತನ ಾಡುವ ಬಗೆ.

ನಿರಪೇಕ್ಷ್ಯ ರೀತಿಯ ನಾಲ್ಕು ಬಗೆಯ ತಾರ್ಕಿಕ ವಾಕ್ಯಗಳನ್ನು ಖಚಿತಪಡಿಸಿ ಂಡರೆ ಎಲ್ಲ ಸಾಮಾನ್ಯ ವಾಕ್ಯಗಳನ್ನೂ ಅವುಗಳ ಅರ್ಥವನ್ನೂ ವ್ಯತ್ಯಾಸಮಾಡದೆ ರ್ಕಿಕ ವಾಕ್ಯಗಳ ರೂಪಕ್ಕೆ ತರುವುದು ಸುಲಭ. ತರ್ಕಶಾಸ್ತ್ರವು ಇದಕ್ಕೆ ಹಲವು ಸಲಹೆ ಳನ್ನು ನೀಡಿದ್ದರೂ ಅವೆಲ್ಲವೂ ಈ ಕೆಳಗಿನ ನಾಲ್ಕು ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಿ ಂಡು ಅವುಗಳನ್ನು ಕ್ರಮಶಃ ಗುರುತಿಸಿಕೊಳ್ಳುವುದಷ್ಟೇ ಸಂಬಂಧಿಸಿರುವುದರಿಂದ ದನ್ನು ನಾವು ಗಮನಿಸಬಹುದು.

(i) ವಾಕ್ಯ ಯಾವುದರ ವಿಷಯವಾಗಿ ಹೇಳಲ್ಪಟ್ಟಿದೆ? — ಇದಕ್ಕೆ ಉತ್ತರ ರೂಪವಾಗಿ '**ಉದ್ದೇಶ್ಯಪದ**' ಸಿಗುತ್ತದೆ.

(ii) ಉದ್ದೇಶ್ಯಪದದ ಬಗ್ಗೆ ವಾಕ್ಯ ಏನನ್ನು ಹೇಳಿದೆ? — ಇದಕ್ಕೆ ಉತ್ತರವಾಗಿ '**ವಿಧೇಯಪದ**' ಸಿಗುತ್ತದೆ.

(iii) ವಿಧೇಯಪದಕ್ಕೂ ಉದ್ದೇಶ್ಯಪದಕ್ಕೂ ಯಾವ ರೀತಿಯ ಸಂಬಂಧ

ವಿದೆ? — ಇದಕ್ಕೆ ಉತ್ತರವಾಗಿ '**ಸಂಯೋಗಿಕ ಪದ**' ಮತ್ತು
ಅದರ ಗುಣ ಗೊತ್ತಾಗುತ್ತದೆ.

(iv) ಉದ್ದೇಶ್ಯಪದದ ಎಷ್ಟು ಅಂಶ ವಿಧೇಯಪದದ ವಸ್ತುವಾಗಿದೆ? — ಇದಕ್ಕೆ ಉತ್ತರವಾಗಿ '**ಪ್ರಮಾಣ-ಸೂಚಕಪದ**' ಸಿಗುತ್ತದೆ.

ಇವುಗಳನ್ನು ಕಂಡುಹಿಡಿದು ಅವುಗಳ ಕ್ರಮದಲ್ಲಿ ವಾಕ್ಯವನ್ನು ರಚಿಸಿ, ಅಗತ್ಯವಾದರೆ ಹಲವು ಇತರ ಶಬ್ದಗಳನ್ನು ಸೇರಿಸಿಕೊಂಡರೆ ತಾರ್ಕಿಕ ವಾಕ್ಯ ಬರುತ್ತದೆ. ಈ ಮಾರ್ಗವನ್ನು ಸಾಧಾರಣವಾಗಿ ನಾವು ಅನುಸರಿಸಬಹುದಾದರೂ ಮತ್ತು ಹಲವು ಅಂಶಗಳನ್ನು ಗಮನದಲ್ಲಿಟ್ಟುಕೊಂಡರೆ ಪರಿವರ್ತನ ಕಾರ್ಯದಲ್ಲಿ ನಾವು ತಪ್ಪುವುದಿಲ್ಲ. ಅವು ಯಾವುವೆಂದರೆ

1. ಕೆಲವು ಸಾಮಾನ್ಯ ವಾಕ್ಯಗಳು 'ಎಲ್ಲಾ', 'ಪ್ರತಿಯೊಂದೂ' 'ಯಾವುದಾದರೂ' ಎನ್ನುವ ಪದಗಳನ್ನು ಹೊಂದಿದ್ದು ನಿಷೇಧಾತ್ಮಕ ಸೂಚನೆಯನ್ನೂ ನೀಡಿದ್ದರೆ ಅಂತಹ ವಾಕ್ಯಗಳನ್ನು **ಅಪೂರ್ಣ ವ್ಯಾಪಕ ನಿಷೇಧಾತ್ಮಕ** ('O') ರೂಪಕ್ಕೆ ತರಬೇಕು.

ಉದಾಹರಣೆ—

(a) ಹೊಳೆಯುವುದೆಲ್ಲಾ ಬಂಗಾರವಲ್ಲ:

ತಾರ್ಕಿಕ ವಾಕ್ಯ: ಹಲವು ಹೊಳೆಯುವ ವಸ್ತುಗಳು ಬಂಗಾರವಾಗಿಲ್ಲ.

(b) ಪ್ರತಿಯೊಂದು ಖಾಯಿಲೆಯೂ ಮರಣವನ್ನು ತರುವುದಿಲ್ಲ:

ತಾರ್ಕಿಕವಾಕ್ಯ: ಹಲವು ಖಾಯಿಲೆಗಳು ಮರಣವನ್ನು ತರುವುದಿಲ್ಲ.

2. ಹಾಗೆ ನಿಷೇಧಾತ್ಮಕ ಸೂಚನೆಯನ್ನು ನೀಡದ ವಾಕ್ಯಗಳು 'ಎಲ್ಲಾ', 'ಪ್ರತಿಯೊಂದೂ', 'ಯಾವುದಾದರೂ' ಎನ್ನುವ ಪದಗಳನ್ನು ಹೊಂದಿದ್ದರೆ ಅವನ್ನು **ಪೂರ್ಣವ್ಯಾಪಕ ಭಾವಾತ್ಮಕ** ('A') ರೂಪಕ್ಕೆ ಪರಿವರ್ತಿಸಬೇಕು.

3. 'ಅನೇಕ', 'ಬಹು', 'ಹೆಚ್ಚಿನ' 'ಒಂದನ್ನು ಬಿಟ್ಟು ಮಿಕ್ಕ ಎಲ್ಲಾ' 'ಹಲವು' ಮುಂತಾದ ಪದಗಳನ್ನು ಹೊಂದಿರುವ ವಾಕ್ಯಗಳನ್ನು **ಅಪೂರ್ಣವ್ಯಾಪಕ**ವೆಂದು ತೀರ್ಮಾನಿಸಬೇಕು.

(i) ಅವುಗಳ ಜತೆಗೆ ನಿಷೇಧಾತ್ಮಕ ಸೂಚನೆ ಇದ್ದರೆ ಅಪೂರ್ಣ–ವ್ಯಾಪಕ-ನಿಷೇಧಾತ್ಮಕ ('O') ವೆಂದೂ,

(ii) ನಿಷೇಧಾತ್ಮಕ ಸೂಚನೆ ಇಲ್ಲದಿದ್ದರೆ ಅಪೂರ್ಣ-ವ್ಯಾಪಕ ಭಾವಾತ್ಮಕ ('I') ಎಂದೂ ಪರಿಗಣಿಸಬೇಕು.

ಉದಾಹರಣೆ :

1. ಅನೇಕ ವಿದ್ಯಾರ್ಥಿಗಳು ಬರಲಿಲ್ಲ :
ತಾರ್ಕಿಕ ವಾಕ್ಯ : ಹಲವು ವಿದ್ಯಾರ್ಥಿಗಳು ಬಂದಿರಲಿಲ್ಲ. (SoP)

2. ಒಬ್ಬನನ್ನು ಬಿಟ್ಟು ಎಲ್ಲ ವಿದ್ಯಾರ್ಥಿಗಳೂ ಬಂದಿದ್ದರು.
ತಾರ್ಕಿಕ ವಾಕ್ಯ : ಹಲವು ವಿದ್ಯಾರ್ಥಿಗಳು ಬಂದಿದ್ದರು. (SiP)

4. ಹಲವು ಸಾಮಾನ್ಯ ವಾಕ್ಯಗಳಲ್ಲಿ ಉದ್ದೇಶ್ಯಪದದ ವ್ಯಾಪ್ತಿಯನ್ನು ಸೀಮಿತಗೊಳಿಸುವ ಪ್ರಯತ್ನಗಳೂ ಇರುತ್ತವೆ. ಇವಕ್ಕೆ **ಬಾಧಕ ವಾಕ್ಯ**ಗಳೆಂದು ಹೆಸರು. ಉದಾಹರಣೆಗೆ "ಏಕಮಾತ್ರ" "ಅಲ್ಲದೆ ಬೇರೆಯಲ್ಲ" ಮುಂತಾದ ಪ್ರತ್ಯಯಗಳು ಉದ್ದೇಶ್ಯಪದದ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತವೆ. ಇಂತಹ ವಾಕ್ಯಗಳನ್ನು ಎರಡು ರೀತಿಯಲ್ಲಿ ತಾರ್ಕಿಕ ರೂಪಕ್ಕೆ ತರಬಹುದು.

(ಅ) ಸಾಮಾನ್ಯ ವಾಕ್ಯದ ಉದ್ದೇಶ್ಯಪದ ಮತ್ತು ವಿಧೇಯಪದಗಳನ್ನು ಸ್ಥಳ ಬದಲಾವಣೆ ಮಾಡಿ ಪೂರ್ಣವ್ಯಾಪಕ ಭಾವಾತ್ಮಕ ('A') ರೂಪಕ್ಕೆ ತರಬಹುದು. ಅಥವಾ

(ಆ) ಸಾಮಾನ್ಯವಾಕ್ಯದ ಉದ್ದೇಶಪದಕ್ಕೆ ಅತಿ ವಿರುದ್ಧವಾದ (ಎಂದರೆ ವ್ಯಾಘಾತಕವಾದ) ಪದವನ್ನು ನೀಡಿ ಪೂರ್ಣವ್ಯಾಪಕ ನಿಷೇಧಾತ್ಮಕ ('E') ರೂಪಕ್ಕೆ ತರಬಹುದು.

ಉದಾಹರಣೆ—

ಸದಸ್ಯರು ಮಾತ್ರ ಇಲ್ಲಿಗೆ ಪ್ರವೇಶ ಹೊಂದಿರುತ್ತಾರೆ.
ತಾರ್ಕಿಕ ವಾಕ್ಯ : A — ಎಲ್ಲ ಪ್ರವೇಶ ಹೊಂದಿರುವವರೂ ಸದಸ್ಯರಾಗಿದ್ದಾರೆ. (SaP)
E — ಯಾವ 'ಅಸದಸ್ಯ'ನೂ ಪ್ರವೇಶ ಹೊಂದಲಾರ (SeP)

5. ಹಲವು ಸಲ ಉದ್ದೇಶಪದದ ಹಲವು ಅಂಶಗಳನ್ನು ಬಿಟ್ಟು ಮಿಕ್ಕ ಎಲ್ಲ ಕ್ಷೇತ್ರಕ್ಕೂ ವಿಧೇಯಪದ ಅನ್ವಯವಾಗುತ್ತದೆ. ಇಂತಹ ವಾಕ್ಯಕ್ಕೆ **ಅಪವಾದ ವಾಕ್ಯ**ವೆಂದು ಹೆಸರು. ಈ ಸಂದರ್ಭಗಳಲ್ಲಿ ಅಪವಾದವಾಗಿ ನಿಲ್ಲುವವು ನಮಗೆ ಖಚಿತ

ವಾಗಿ ಗೊತ್ತಿದ್ದರೆ ಆ ವಾಕ್ಯವನ್ನು ಪೂರ್ಣವ್ಯಾಪಕ ಭಾವಾತ್ಮಕ ('A') ವಾಗಿ ಗಣಿಸ ಬೇಕು. ಅಪವಾದವು ನಿಶ್ಚಿತವಾಗಿ ತಿಳಿಯದಿದ್ದಲ್ಲಿ ಅದು ಅಪೂರ್ಣವ್ಯಾಪಕ ಭಾವಾತ್ಮಕ ('I') ವಾಗುತ್ತದೆ.

ಉದಾಹರಣೆ—

1. ಪಾದರಸದ ವಿನಾ ಎಲ್ಲಾ ಖನಿಜಗಳೂ ಘನರೂಪದಲ್ಲಿರುತ್ತವೆ.
(ಇಲ್ಲಿ ಅಪವಾದ ಖಚಿತವಾಗಿ ಗೊತ್ತಿದೆ. ಎಂದರೆ ಅದು 'ಪಾದರಸ'. ಆದ್ದರಿಂದ ಇದನ್ನು 'A' ವಾಕ್ಯ ಮಾಡಬಹುದು).
ತಾರ್ಕಿಕ ವಾಕ್ಯ : ಎಲ್ಲ ಖನಿಜಗಳೂ ಘನರೂಪದಲ್ಲಿರುತ್ತವೆ. (SaP)

2. ಹಲವರ ವಿನಾ ಎಲ್ಲರೂ ಹಾಜರಿದ್ದರು.
(ಇಲ್ಲಿ ಅಪವಾದ ಖಚಿತವಾಗಿಲ್ಲ. ಆದ್ದರಿಂದ ಇಲ್ಲಿ 'I' ವಾಕ್ಯ ಆಗುತ್ತದೆ.)
ತಾರ್ಕಿಕ ವಾಕ್ಯ : ಹಲವು ಜನ ಹಾಜರಾಗಿದ್ದರು. (SiP)

6. ಹಲವು ಸಲ ಸಾಮಾನ್ಯ ಭಾಷೆಯಲ್ಲಿ ಸಂಯುಕ್ತಪದಗಳನ್ನು ಉಪಯೋಗಿಸು ತ್ತೇವೆ. ಎಂದರೆ ಉದ್ದೇಶ್ಯಪದವು ಸಂಯುಕ್ತವಾಗಿರುತ್ತದೆ. ಅಂತಹ ವಾಕ್ಯಗಳನ್ನು ಬಿಡಿಸಿ ಪ್ರತ್ಯೇಕ ಪ್ರತ್ಯೇಕವಾಗಿಯೇ ತಾರ್ಕಿಕ ವಾಕ್ಯಗಳನ್ನು ಮಾಡಬೇಕು.

ಉದಾಹರಣೆ—

ಗಂಗಾ ಮತ್ತು ಯಮುನಾ ನದಿಗಳು ಉತ್ತರ ಭಾರತದಲ್ಲಿ ಹರಿಯುತ್ತವೆ.

ತಾರ್ಕಿಕ ವಾಕ್ಯ :

(ಅ) ಗಂಗಾ ನದಿಯು ಉತ್ತರ ಭಾರತದಲ್ಲಿ ಹರಿಯುತ್ತದೆ.
(ಆ) ಯಮುನಾ ನದಿಯು ಉತ್ತರ ಭಾರತದಲ್ಲಿ ಹರಿಯುತ್ತದೆ.

7. ಒಮ್ಮೊಮ್ಮೆ ಒಂದು ವಸ್ತು ಅಥವಾ ವ್ಯಕ್ತಿಯನ್ನೇ ಉದ್ದೇಶಿಸುವ ವಾಕ್ಯ ಗಳಿರುತ್ತವೆ. ಅವುಗಳನ್ನು ಏಕವಾಚಕವೆಂದು ಕರೆಯುತ್ತಾರೆ. ಅಂತಹವನ್ನು ಪೂರ್ಣ ವ್ಯಾಪಕ ತಾರ್ಕಿಕ ವಾಕ್ಯಕ್ಕೆ ಪರಿವರ್ತಿಸಬೇಕು.

ಉದಾಹರಣೆ—

1. ಹಿಮಾಲಯವು ಪ್ರಪಂಚದಲ್ಲಿ ಅತಿ ಎತ್ತರವಾದ ಶಿಖರವನ್ನು ಹೊಂದಿದೆ.

ತಾರ್ಕಿಕ ವಾಕ್ಯ : ಹಿಮಾಲಯದ ಶಿಖರ ಪ್ರಪಂಚದ ಅತಿ ಎತ್ತರವಾದ ಶಿಖರವಾಗಿದೆ (SaP)

2. ರಾಮನು ರಾವಣನನ್ನು ಕೊಂದನು.

ತಾರ್ಕಿಕ ವಾಕ್ಯ : ರಾಮನು ರಾವಣನನ್ನು ಕೊಂದವನಾಗಿದ್ದಾನೆ (SaP)

8. ಹಲವು ಸಲ ಪ್ರಶ್ನಾರ್ಥಕ ವಾಕ್ಯಗಳೂ ಇರುತ್ತವೆ. ಇವು ಅನೇಕ ಸಲ ತಮ್ಮ ಉತ್ತರವನ್ನು ಸೂಚಿಸುತ್ತವೆ. ಅಂತಹ ಸಂದರ್ಭದಲ್ಲಿ ಸುಲಭವಾಗಿ ತಾರ್ಕಿಕ ರೂಪಕ್ಕೆ ತರಬಹುದು.

ಉದಾಹರಣೆ—

1. ಹರಿಶ್ಚಂದ್ರನಿಗಿಂತ ಸತ್ಯವಾಕ್ಯುಳ್ಳವನು ಇದ್ದಾನೆಯೇ?

2. ಸೀತೆಯನ್ನು ಕಳಂಕ ಮುಟ್ಟೀತೇ ?

ಇವುಗಳ ಅರ್ಥ ಬಹು ಸ್ಪಷ್ಟವೇ ಇರುವುದರಿಂದ ಅದನ್ನು ಅನುಸರಿಸಿ ತಾರ್ಕಿಕ ರೂಪಕ್ಕೆ ತರಬಹುದು.

ಹೀಗೆ ಸಾಮಾನ್ಯ ವಾಕ್ಯಗಳ ಅರ್ಥವನ್ನು ಗ್ರಹಿಸಿ, ಆ ಅರ್ಥಕ್ಕೆ ಕುಂದುಬರದಂತೆ ತಾರ್ಕಿಕ ವಾಕ್ಯಗಳ ರೂಪಕ್ಕೆ ತರಬಹುದು.

## 5. ತಾರ್ಕಿಕ ವಾಕ್ಯಗಳು ಮತ್ತು ಅವುಗಳಲ್ಲಿನ ಪದಗಳ ವ್ಯಾಪ್ತಿ

ನಿರಪೇಕ್ಷ ತಾರ್ಕಿಕ ವಾಕ್ಯಗಳು ನಾಲ್ಕು ಎಂದು ನಾವು ಈಗಾಗಲೇ ನೋಡಿದ್ದೇವೆ. ಅವು A, E, I, O. ಇವುಗಳಲ್ಲಿ ಪ್ರತಿಯೊಂದರಲ್ಲೂ ಎರಡು ಪದಗಳಿರುತ್ತವೆ- ಒಂದು, ಉದ್ದೇಶ್ಯಪದ (ಸಂಜ್ಞಾರ್ಥವಾಗಿ S) ಮತ್ತು ಎರಡನೆಯದು ವಿಧೇಯಪದ (ಸಂಜ್ಞಾರ್ಥವಾಗಿ P). ಈ ಎರಡು ಪದಗಳು ತಾವು ಪ್ರತಿನಿಧಿಸುವ ವರ್ಗದಲ್ಲಿ ಎಷ್ಟು ಕ್ಷೇತ್ರವನ್ನು ಆವರಿಸಿಕೊಳ್ಳುತ್ತವೆ ಎನ್ನುವುದನ್ನು ಗಮನಿಸಿದರೆ ವಿಚಾರ ಹಂತಹಂತವಾಗಿ 'ಅನುಮಾನ'ವಾಗಿ ಬೆಳೆಯುವುದಕ್ಕೆ ಅವಕಾಶವಾಗುತ್ತದೆ. ಎಂದರೆ, ಪ್ರತಿಯೊಂದು ಪದವೂ ತನ್ನ ವರ್ಗದ ಎಲ್ಲ ವ್ಯಕ್ತಿ ಅಥವಾ ಅಂಶಗಳಿಗೂ ಅನ್ವಯವಾಗುತ್ತದೆಯೇ ಇಲ್ಲವೇ ಎನ್ನುವುದೇ ಇಲ್ಲಿನ ವಿಚಾರ. ಕ್ಷೇತ್ರ ವ್ಯಾಪ್ತಿಯಲ್ಲಿ ಅಥವಾ ಸಂಖ್ಯಾರೂಪದಲ್ಲಿ ಒಂದು ಪದವು ಕ್ಷೇತ್ರದಲ್ಲಿನ ಸಮಸ್ತ ಅಂಶಗಳನ್ನು ಒಳಗೊಂಡಿದ್ದರೆ 'ವ್ಯಾಪ್ತಿ' ಎನ್ನುತ್ತಾರೆ. ಇದನ್ನು '√' ಸಂಕೇತದಿಂದ ಸೂಚಿಸಬಹುದು. ಹಾಗೆಯೇ ಒಂದು ಪದವು ವರ್ಗದ ಅಥವಾ ಕ್ಷೇತ್ರದ ಹಲವು ಅಂಶಗಳನ್ನು ಮಾತ್ರ ಒಳಗೊಂಡಿದ್ದರೆ 'ಅವ್ಯಾಪ್ತಿ' ಎನ್ನುತ್ತಾರೆ. ಇದನ್ನು '×' ಸಂಕೇತದಿಂದ ಸೂಚಿಸಬಹುದು.

ಈ ನಿರೂಪಣೆಯನ್ನು ಅನುಸರಿಸಿ ನಿರಪೇಕ್ಷ ವಾಕ್ಯಗಳಲ್ಲಿ ಅವುಗಳ ವಸ್ತು-ವ್ಯಾಪ್ತಿ ಅಥವಾ ಕ್ಷೇತ್ರವ್ಯಾಪ್ತಿ ಉದ್ದೇಶ್ಯ ಮತ್ತು ವಿಧೇಯ ಪದಗಳ ದೃಷ್ಟಿಯಿಂದ ಹೇಗಿರುತ್ತದೆ ಎನ್ನುವುದನ್ನು ನೋಡೋಣ.

**A. ಪೂರ್ಣವ್ಯಾಪಕ ಭಾವಾತ್ಮಕ ವಾಕ್ಯ – ಎಲ್ಲ S — P**

ಉದಾ : ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ. S a P

(ಮಾನವರೂ = S, ಮರ್ತ್ಯರಾಗಿದ್ದಾರೆ = P)

ಇಲ್ಲಿ ಉದ್ದೇಶ್ಯಪದ (S) ತನ್ನ ವರ್ಗದ ಎಲ್ಲ ವ್ಯಕ್ತಿಗಳನ್ನೂ ಒಳಗೊಂಡಂತೆ ಸೂಚನೆ ನೀಡುತ್ತದೆ. ಎಂದರೆ ತನ್ನ ಕ್ಷೇತ್ರದ ಎಲ್ಲ ಅಂಶಗಳನ್ನೂ ಆವರಿಸಿಕೊಂಡಿದೆ. ಎಂದರೆ 'ವ್ಯಾಪ್ತಿ' ಹೊಂದಿದೆ.

ಆದರೆ ವಿಧೇಯಪದದ ಕ್ಷೇತ್ರದಲ್ಲಿ, ಎಂದರೆ 'ಮರ್ತ್ಯ'ರು ಎನ್ನುವ ವರ್ಗದಲ್ಲಿ 'ಮಾನವ'ರೇ ಅಲ್ಲದೆ, ಇತರ ಪ್ರಾಣಿಗಳೂ ಇರುವುದರಿಂದ ವಿಧೇಯಪದ ಮಾನವರೆಂಬ ಅಂಶಕ್ಕೆ ಮಾತ್ರ ಅನ್ವಯವಾಗುತ್ತದೆ. ಎಂದರೆ ಅದು ತನ್ನ ಪೂರ್ಣ ಕ್ಷೇತ್ರವನ್ನು ಈ ವಾಕ್ಯದಲ್ಲಿ ಸೂಚಿಸುವುದಿಲ್ಲ. ಆದ್ದರಿಂದ ಅದಕ್ಕೆ ವ್ಯಾಪ್ತಿಯ ದೃಷ್ಟಿಯಿಂದ 'ಅಪೂರ್ಣ'ವೆಂದು ಹೇಳುತ್ತದೆ. ಎಂದರೆ ಅದು 'ಅವ್ಯಾಪ್ತ'ವಾಗಿದೆ.

ಇದನ್ನು ವೃತ್ತಗಳ ಸಂಕೇತದಿಂದ ತೋರಿಸಬಹುದು.




S = 'ವ್ಯಾಪ್ತ'

P = 'ಅವ್ಯಾಪ್ತ'

ಹೀಗೆ ಪೂರ್ಣವ್ಯಾಪಕ ಭಾವಾತ್ಮಕ ತಾರ್ಕಿಕ ವಾಕ್ಯ ಎಂದರೆ 'A' ಎನ್ನುವ ವಾಕ್ಯದಲ್ಲಿ ಉದ್ದೇಶ್ಯಪದ (S) ಮಾತ್ರ 'ವ್ಯಾಪ್ತ'ವಾಗಿದ್ದು ವಿಧೇಯಪದ (P) 'ಅವ್ಯಾಪ್ತ'ವಾಗಿರುತ್ತದೆ. ಇದನ್ನು ಸಂಜ್ಞಾರ್ಥವಾಗಿ ಹೀಗೆ ಹೇಳಬಹುದು.

ಎಲ್ಲ $\overset{\surd}{S}$ — $\overset{\times}{P}$ .... A

## B. ಅಪೂರ್ಣವ್ಯಾಪಕ ಭಾವಾತ್ಮಕ ವಾಕ್ಯ

ಉದಾ : ಹಲವು ಭಾರತೀಯರು (S) ಕನ್ನಡಿಗರಾಗಿದ್ದಾರೆ (P) (SiP)

ಇಲ್ಲಿ ಉದ್ದೇಶ್ಯಪದ (S) ವಾಗಲೀ, ವಿಧೇಯಪದ (P) ವಾಗಲೀ ತಮ್ಮ ಕ್ಷೇತ್ರವನ್ನು ಅಥವಾ ವರ್ಗಗಳನ್ನು ಪೂರ್ಣವಾಗಿ ಆವರಿಸುವುದಿಲ್ಲ ಹೇಗೆಂದರೆ 'ಭಾರತೀಯ'ರೆಲ್ಲರೂ ಕನ್ನಡಿಗರಲ್ಲ. ಎಂದರೆ 'ಭಾರತೀಯ'ರ ವರ್ಗ ಅಪೂರ್ಣವಾಗಿ ಅಥವಾ, ಆಂಶಿಕವಾಗಿ ಮಾತ್ರ ಸೂಚಿತವಾಗಿದೆ. ಹಾಗೆಯೇ 'ಕನ್ನಡಿಗ'ರಾದವರು 'ಭಾರತೀಯ'ರಲ್ಲದೆಯೂ ಇರಬಹುದು. ಎಂದರೆ ಕನ್ನಡಿಗರಾಗಿದ್ದೂ ಭಾರತದೇಶದಲ್ಲಿ ಇಲ್ಲದಿರಬಹುದು. ಎಂದರೆ ವಿಧೇಯಪದದ ವ್ಯಾಪ್ತಿಯೂ ಕೂಡ ಪೂರ್ಣವಾಗಿಲ್ಲ. ಇದನ್ನು ಈ ರೀತಿ ವೃತ್ತಗಳಲ್ಲಿ ಸೂಚಿಸಬಹುದು.




ಈ ಎರಡು ಸಾಂಕೇತಿಕ ವೃತ್ತಗಳು ಒಂದರ ಮೇಲೆ ಮತ್ತೊಂದು ಬಿದ್ದಿರುವ ಕ್ಷೇತ್ರಕ್ಕೆ ಮಾತ್ರ ಈ ವಾಕ್ಯ ಅನ್ವಯವಾಗುತ್ತದೆ. ಎಂದರೆ ಉದ್ದೇಶ್ಯಪದ (S) ಮತ್ತು ವಿಧೇಯಪದ ಎರಡೂ 'ವ್ಯಾಪ್ತ'ವಾಗಿಯೇ ಇವೆ. ಹೀಗೆ ಅಪೂರ್ಣವ್ಯಾಪಕ ಭಾವಾತ್ಮಕ ವಾಕ್ಯ, ಎಂದರೆ 'I' ಎನ್ನುವ ವಾಕ್ಯದಲ್ಲಿ ಕೆಲವು S — P ಎನ್ನುವುದರಲ್ಲಿ ಎರಡೂ ಪದಗಳು 'ಅವ್ಯಾಪ್ತ'ವಾಗಿ ಇರುತ್ತವೆ—

ಕೆಲವು $\overset{\times}{S}$ — $\overset{\times}{P}$ .... I

C. ಪೂರ್ಣ ವ್ಯಾಪಕ ನಿಷೇಧಾತ್ಮಕ ವಾಕ್ಯ — ಯಾವೊಂದು S — P ಅಲ್ಲ.

ಉದಾ : ಯಾವ ಆಫ್ರಿಕನ್ನನೂ ಅಮೆರಿಕನ್ನನಲ್ಲ (SeP)
(ಆಫ್ರಿಕನ್ನನೂ = S, ಅಮೆರಿಕನ್ನ = P)

ಇಲ್ಲಿ ಉದ್ದೇಶ್ಯಪದ ಮತ್ತು ವಿಧೇಯ ಪದಗಳೆರಡೂ ಅನ್ಯೋನ್ಯ ಬಹಿಷ್ಕೃತ ವಾಗುವ ಕ್ಷೇತ್ರಗಳನ್ನು ಸೂಚಿಸುತ್ತವೆ. 'ಆಫ್ರಿಕ' ವರ್ಗಕ್ಕೆ ಸೇರಿದವನು 'ಅಮೆರಿಕನ್ನ' ನಲ್ಲ, ಹಾಗೆಯೇ 'ಅಮೆರಿಕ' ವರ್ಗಕ್ಕೆ ಸೇರಿದವನು 'ಆಫ್ರಿಕನ್ನ'ನಲ್ಲ. ಎಂದರೆ ಎರಡೂ ಪದಗಳು 'ವ್ಯಾಪ್ತ'ವಾಗಿವೆ. ಇದನ್ನು ಹೀಗೆ ವೃತ್ತಗಳಲ್ಲಿ ಸೂಚಿಸಬಹುದು.






ಎಂದರೆ ಪೂರ್ಣವ್ಯಾಪಕ ನಿಷೇಧಾತ್ಮಕ ವಾಕ್ಯ ಎಂದರೆ ('E' ಯಾವೊಂದು S — P ಅಲ್ಲ ಎನ್ನುವಲ್ಲಿ) ಎರಡೂ ಪದಗಳು 'ವ್ಯಾಪ್ತ' ವಾಗಿರುತ್ತವೆ.

ಯಾವೊಂದು $\overset{\checkmark}{S}$ — $\overset{\checkmark}{P}$ ಅಲ್ಲ . . . E

D. ಅಪೂರ್ಣವ್ಯಾಪಕ ನಿಷೇಧಾತ್ಮಕ — ಕೆಲವು S — P ಅಲ್ಲ.

ಉದಾ : ಹಲವು ಪ್ರಾಣಿಗಳು ಜಲವಾಸಿಗಳಲ್ಲ SoP
(ಪ್ರಾಣಿಗಳು = S, ಜಲವಾಸಿ = P)

ಇಲ್ಲಿ 'ಪ್ರಾಣಿ'ಗಳ ಕ್ಷೇತ್ರದಲ್ಲಿ ಹಲವನ್ನೇ ಉದ್ದೇಶ್ಯಪದ ಹೇಳುವುದರಿಂದ ಸ್ವಾಭಾ ವಿಕವಾಗಿಯೇ ಆ ಪದ 'ಅವ್ಯಾಪ್ತ'ವಾದದ್ದು. ಆದರೆ ವಿಧೇಯಪದವು 'ಜಲವಾಸಿ'ಗಳ

ಸಮಸ್ತ ಕ್ಷೇತ್ರವನ್ನೂ ಗಮನಿಸಿ, ಹಲವು ಪ್ರಾಣಿಗಳು ಆ ಕ್ಷೇತ್ರದಿಂದ ಹೊರಗೆ ಇವೆ ಎನ್ನುತ್ತದೆ. ಎಂದರೆ ವಿಧೇಯಪದ 'ವ್ಯಾಪ್ತ'ವಾಗಿದೆ.

ಇದನ್ನು ವೃತ್ತಗಳಲ್ಲಿ ಹೀಗೆ ಸೂಚಿಸಬಹುದು.




ಉದ್ದೇಶ್ಯಪದದ ಸ್ವಲ್ಪಭಾಗ ವಿಧೇಯಪದದ ಹೊರಗೆ ಇದ್ದು ಈ ವಾಕ್ಯದಲ್ಲಿ ಹೊರಗಿರುವ ಕ್ಷೇತ್ರ ಮಾತ್ರ ಸೂಚಿತವಾಗಿದೆ. ಎಂದರೆ ಅಪೂರ್ಣ ವ್ಯಾಪಕ ನಿಷೇಧಾತ್ಮಕ ವಾಕ್ಯ 'O'ನಲ್ಲಿ ಉದ್ದೇಶ್ಯಪದ 'ಅವ್ಯಾಪ್ತಿ'ಯನ್ನು ಹೊಂದಿದ್ದು, ವಿಧೇಯಪದ 'ವ್ಯಾಪ್ತಿ'ಯನ್ನು ಹೊಂದಿರುತ್ತದೆ.

ಕೆಲವು $S^{\times}$ $P^{\surd}$ ಅಲ್ಲ . . . O

ಹೀಗೆ ತಾರ್ಕಿಕ ವಾಕ್ಯಗಳಲ್ಲಿ S ಮತ್ತು P ಗಳು ವಿವಿಧ ರೀತಿಯಲ್ಲಿ 'ವ್ಯಾಪ್ತ' ಅಥವಾ 'ಅವ್ಯಾಪ್ತ' ಆಗಿರುತ್ತವೆ. ಅವುಗಳನ್ನು ಮತ್ತೆ ಹೀಗೆ ಸ್ಮರಿಸಿಕೊಳ್ಳೋಣ : ವ್ಯಾಪ್ತ = '√' ; ಅವ್ಯಾಪ್ತ = '×'

A — ಎಲ್ಲ S — P........$S^{\surd}$ — $P^{\times}$

E — ಯಾವೊಂದು S — P ಅಲ್ಲ........$S^{\surd}$ – $P^{\surd}$

I — ಕೆಲವು S — P ........$S^{\times}$ — $P^{\times}$

O — ಕೆಲವು S – P ಅಲ್ಲ........$S^{\times}$ — $P^{\surd}$

## ಅಧ್ಯಾಯ 6

# "ಪ್ರತ್ಯಕ್ಷ-ಅನುಮಾನ" ಪ್ರಕರಣ

## (Immediate Inference)

### 1. 'ಅನುಮಾನ' ಕ್ರಿಯೆ

ಒಂದು ಆಲೋಚನೆ ಅಥವಾ ವಿಚಾರದಿಂದ, ಅದರ ಮೇಲೆ ಆಧಾರಗೊಂಡಂತೆ ಮತ್ತೊಂದು ಆಲೋಚನೆ ಅಥವಾ ವಿಚಾರಕ್ಕೆ ಹೋಗುವ ವಿಶಿಷ್ಟ ಮಾನಸಿಕ ಪ್ರವೃತ್ತಿಯನ್ನು 'ಅನುಮಾನ' ಎನ್ನುತ್ತಾರೆ. 'ಊಹಿಸು', 'ತರ್ಕಿಸು' ಎನ್ನುವುದನ್ನೇ ಪಾರಿಭಾಷಿಕವಾಗಿ 'ಅನುಮಾನ' ಎನ್ನುತ್ತಾರೆ. ಉದಾಹರಣೆಗೆ ದೂರದಲ್ಲಿ ಹೊಗೆಯನ್ನು ಕಂಡು, ನಮ್ಮ ವಿಚಾರ ಮುಂದುವರಿದು ಅಲ್ಲಿ 'ಬೆಂಕಿಯೂ ಇದೆ' ಎನ್ನುವ ತೀರ್ಮಾನಕ್ಕೆ ಬರುತ್ತದೆ. 'ಹೊಗೆ' ಎನ್ನುವುದು ನಮ್ಮ ಅನುಭವದಲ್ಲಿ ಪ್ರತ್ಯಕ್ಷವಾಗಿ ಕಾಣುವಂತಹ ಆಧಾರ. ಈ ಆಧಾರದಿಂದ 'ಬೆಂಕಿ' ಎನ್ನುವುದನ್ನು ಊಹಿಸುತ್ತೇವೆ. ಎಂದರೆ ಇಲ್ಲಿನ ಎರಡು ವಿಚಾರಗಳು ಒಂದಕ್ಕೊಂದು ಸಂಬಂಧಪಟ್ಟದ್ದು, ವಿಚಾರದ ಬೆಳವಣಿಗೆಯಲ್ಲಿ ಎರಡು ಹಂತಗಳನ್ನು ಸೂಚಿಸುತ್ತವೆ. ಯಾವುದರಿಂದ ನಮ್ಮ ಮನಸ್ಸು ಆಲೋಚನೆಯಲ್ಲಿ ಪ್ರವೃತ್ತವಾಗುತ್ತದೋ ಅದಕ್ಕೆ 'ಆಧಾರ ವಾಕ್ಯ' ಅಥವಾ **'ಗೃಹೀತ ವಾಕ್ಯ'** (premise) ಎಂದು ಹೆಸರು. ಹಾಗೆ ಪ್ರವೃತ್ತವಾದ ಆಲೋಚನೆ ಯಾವ ಹಂತವನ್ನು ಮುಟ್ಟುತ್ತದೋ ಅದಕ್ಕೆ **'ಅನುಮಿತಿ ವಾಕ್ಯ'** ಅಥವಾ **'ನಿರ್ಣೀತವಾಕ್ಯ'** (conclusion) ಎಂದು ಹೆಸರು. ಮೇಲಿನ ಉದಾಹರಣೆಯಲ್ಲಿ

ದೂರದ ಬೆಟ್ಟದ ಮೇಲೆ ಹೊಗೆ ಇದೆ (ಆಧಾರ ಅಥವಾ ಗೃಹೀತ ವಾಕ್ಯ)
∴ ಅಲ್ಲಿ ಬೆಂಕಿ ಇರಲೇ ಬೇಕು (ಅನುಮಿತಿ ಅಥವಾ ನಿರ್ಣೀತ ವಾಕ್ಯ)

'ಅನುಮಾನ' ಕ್ರಿಯೆಯ ಸಾಮಾನ್ಯ ನಿರೂಪಣೆಯನ್ನು ಮತ್ತೊಮ್ಮೆ ಹೇಳಬೇಕಾದರೆ — ನಮ್ಮ ಮನಸ್ಸು ಒಂದು ಗೃಹೀತ ವಿಚಾರದಿಂದ ಮತ್ತೊಂದು ವಿಚಾರವನ್ನು ಊಹಿಸುವುದು ಅಥವಾ ನಿರ್ಣಯಿಸುವುದು. ಆದರೆ ಇಂತಹ ಅನುಮಾನಕ್ರಿಯೆ ಎರಡು ಬಗೆಯಲ್ಲಿರಬಹುದು.

(i) ಆಧಾರ ಅಥವಾ ಗೃಹೀತ ವಾಕ್ಯಗಳು ಹೆಚ್ಚು ವ್ಯಾಪಕವಾಗಿದ್ದು, ಎಂದರೆ 'ಸಾಮಾನ್ಯ'ವಾಗಿದ್ದು, ಅನುಮಿತಿ ವಾಕ್ಯಗಳ ವ್ಯಾಪ್ತಿ ಅದ

ಕ್ಕಿಂತ ವಿಸ್ತಾರಗೊಳ್ಳದೆ ಇದ್ದರೆ, ಅಥವಾ 'ಸೀಮಿತ' ಅಥವಾ 'ಅವ್ಯಾಪಕ'ವಾಗಿದ್ದರೆ, ಅಂತಹ 'ಅನುಮಾನ'ವನ್ನು **'ನಿಗಮನ ಅನುಮಾನ'** (Deductive Inference) ಎನ್ನುತ್ತಾರೆ.

ಉದಾ : ಎಲ್ಲ ಮಾನವರೂ ಮರ್ತ್ಯರು (ಗೃಹೀತ ವಾಕ್ಯ)
∴ ಹಲವು ಮರ್ತ್ಯರು ಮಾನವರು (ಅನುಮಿತಿ ವಾಕ್ಯ)

ಮೊದಲನೆಯದು 'A' ಆಗಿದ್ದರೆ, ಎರಡನೆಯದು 'I' ಆಗಿದೆ. ಎಂದರೆ ಗೃಹೀತವಾಕ್ಯ ಪೂರ್ಣವ್ಯಾಪಕವಾಗಿದ್ದರೆ, ನಿರ್ಣೀತವಾಕ್ಯ ಅಪೂರ್ಣವ್ಯಾಪಕವಾಗಿದೆ.

(ii) ಹಲವು ಸಲ ನಮ್ಮ ಅನುಮಾನ ಕ್ರಿಯೆಯ ಧಾಟಿ 'ಸೀಮಿತ' ವ್ಯಾಪ್ತಿಯುಳ್ಳ ಹಲವೇ ನಿದರ್ಶನಗಳಿಂದ ಪ್ರಾರಂಭವಾಗಿ ಬಹು ವಿಸ್ತಾರವಾದ 'ಸಾಮಾನ್ಯ' ತತ್ವಗಳನ್ನು ಊಹಿಸಬಹುದು. ಎಂದರೆ ಗೃಹೀತವಾಕ್ಯದ ವ್ಯಾಪ್ತಿ ಸೀಮಿತವಾಗಿದ್ದು, ಅನುಮಿತಿ ವಾಕ್ಯದ ವ್ಯಾಪ್ತಿ ವಿಸ್ತಾರವಾಗಿರುತ್ತದೆ.

ಉದಾ : A B C ಎನ್ನುವ ಭೌತಿಕ ವಸ್ತುಗಳು ಗುರುತ್ವಾಕರ್ಷಣಕ್ಕೆ ಒಳಗಾಗಿವೆ. (ಗೃಹೀತ ವಾಕ್ಯ)
∴ ಎಲ್ಲ ಭೌತಿಕ ವಸ್ತುಗಳೂ ಗುರುತ್ವಾಕರ್ಷಣಕ್ಕೆ ಒಳಗಾಗುತ್ತವೆ. (ನಿರ್ಣೀತ ವಾಕ್ಯ)

ಮೊದಲನೆಯದು ಅಪೂರ್ಣವ್ಯಾಪಕ ಆಗಿದ್ದರೆ, ಎರಡನೆಯದು ಪೂರ್ಣವ್ಯಾಪಕ ಆಗಿದೆ. ಇಂತಹ 'ಅನುಮಾನ ಕ್ರಿಯೆ'ಯನ್ನು **'ವಿಗಮನ ಅನುಮಾನ'** (Inductive Inference) ಎನ್ನುತ್ತಾರೆ.

**. 'ನಿಗಮನ ಅನುಮಾನ'ದ ಎರಡು ರೂಪಗಳು**

ಮೇಲೆ 'ನಿಗಮನ ಅನುಮಾನ' ಏನೆಂಬುದನ್ನು ನೋಡಿದ್ದೇವೆ. ಇದರಲ್ಲಿ ಎರಡು ಧಾನ ಅಥವಾ ರೂಪಗಳನ್ನು ಕಾಣಬಹುದು.

ಆಧಾರ ಅಥವಾ ಗೃಹೀತ ವಾಕ್ಯ ಒಂದೇ ಇದ್ದು, ಅದರಿಂದ ನೇರವಾಗಿ, ಎಂದರೆ ುತ್ತಿ ಯಾವ ಆಧಾರದ ನೆರವೂ ಇಲ್ಲದೆ, ಮತ್ತೊಂದು ವಾಕ್ಯವನ್ನು ಊಹಿಸಿದರೆ ಅದಕ್ಕೆ

ಪ್ರತ್ಯಕ್ಷ ಅನುಮಾನ'[1] (Immediate Inference) ಎನ್ನುತ್ತಾರೆ. 'Immediate ಎಂದರೆ 'ತಕ್ಷಣ' ಎಂದರ್ಥ. ಎಂದರೆ 'ವಿಳಂಬ'ವಿಲ್ಲದೆ ಒಂದು ವಿಚಾರದಿಂದ ನೇರವಾ ಮತ್ತೊಂದು ತೀರ್ಮಾನಕ್ಕೆ ಬರುವಂತಹುದು. ಈ 'ತಕ್ಷಣ' 'ವಿಳಂಬವಿಲ್ಲದೆ' ಎನ್ ವುದಕ್ಕೆ ಪಾರಿಭಾಷಿಕವಾದ ಅರ್ಥವೇನೆಂದರೆ 'ಯಾವ ಬೇರೆಯ ಮಧ್ಯಮಾನುವರ್ತಿಯ (Mediator, Middle agent i.e., Middle Term) ಆಧಾರ ಅಗತ್ಯವಿಲ್ಲ ಎಂದರ್ಥ. ಇಂತಹುದು ಪ್ರತ್ಯಕ್ಷ ಅನುಮಾನ ಆಗುತ್ತದೆ.

ಯಾವ ಅನುಮಾನ ಕ್ರಿಯೆಯಲ್ಲಿ ಮಧ್ಯಮಾನುವರ್ತಿ ಇದ್ದಲ್ಲಿ ಮಾತ್ರ ನಿರ್ಣಯಗಳನ್ನು ಮಾಡಬಹುದೋ ಅದನ್ನು 'ಅಪ್ರತ್ಯಕ್ಷ' ಅಥವಾ 'ಪರೋಕ್ ಅನುಮಾನ' (Mediate Inference) ಎನ್ನುತ್ತಾರೆ. ಉದಾಹರಣೆಗಳಿಂದ ಇವೆರಡ ವ್ಯತ್ಯಾಸಗಳನ್ನು ಗಮನಿಸಿದರೆ, ಅನುಮಾನ ಕ್ರಿಯೆಯಲ್ಲಿ ಇವೆರಡರ ವಿಶಿಷ್ಟ ಗುಣಗಳನ್ ಅರಿಯಬಹುದು.

(i) ಎಲ್ಲ ಮಾನವರೂ ಮರ್ತ್ಯರು — A .... ಗೃಹೀತ ವಾಕ್ಯ
∴ ಹಲವು ಮಾನವರು ಮರ್ತ್ಯರು — I .... ನಿರ್ಣಯ ವಾಕ್ಯ
(ಅಥವಾ ಹಲವು ಮರ್ತ್ಯರು ಮಾನವರು)

(ii) ಎಲ್ಲ ಮಾನವರೂ ಮರ್ತ್ಯರು — A } ಗೃಹೀತ ವಾಕ್ಯಗಳು
ಸಾಕ್ರಟೀಸನು ಮಾನವನು — A }
∴ ಸಾಕ್ರಟೀಸನು ಮರ್ತ್ಯನು — A — ನಿರ್ಣೀತವಾಕ್ಯ

ಈ ಎರಡನೆಯ ಉದಾಹರಣೆಯನ್ನು ಗಮನಿಸಿದಾಗ ಇಲ್ಲಿ ಎರಡು ಆಧಾರ ವಾಕ್ ಗಳಿವೆ. ಇದರಿಂದ ಮೂರನೆಯ ವಾಕ್ಯವನ್ನು ಊಹಿಸಿದ್ದೇವೆ. ಈ ಎರಡು ಆಧಾ ವಾಕ್ಯಗಳಲ್ಲಿ 'ಮಾನವ' ಎನ್ನುವ ಪದ ಎರಡು ವಾಕ್ಯಗಳನ್ನು ಸೇರಿಸುತ್ತದೆ. ಈ ಪದ ಇಲ್ಲದಿದ್ದರೆ, ಎಂದರೆ ಸಾಕ್ರಟೀಸನು 'ಮಾನವ'ನಲ್ಲದೆ 'ಕಲ್ಲು' ಆಗಿದ್ದರೆ, ನಿರ್ಣಯವಾಕ್ ನಾವು ಊಹಿಸಿದ್ದು ಆಗುತ್ತಿರಲಿಲ್ಲ. ಏಕೆ? ಒಂದು ಸಂಗತವಾದ ನಿರ್ಣಯವನ್ನೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಎಂದರೆ ಒಂದು ನಿರ್ಣಯವಾಕ್ಯದ ಭವಿಷ್ಯ ಎರಡ ಆಧಾರವಾಕ್ಯಗಳನ್ನು ಒಟ್ಟುಗೂಡಿಸುವ ಪದದ ಮೇಲೆ ನಿಂತಿದೆ. ಈ ಪದಕ್ಕೆ **'ಮಧ್ಯಮ ಪದ'** (Middle Term) ಎಂದು ಹೆಸರು.

ಇಂತಹ ಮಧ್ಯಮಾನುವರ್ತಿಯ ಅಗತ್ಯ ಮೊದಲ ಉದಾಹರಣೆಯಲ್ಲಿ ಇಲ್ಲ ಒಂದು ವಾಕ್ಯ ನೇರವಾಗಿ ಮತ್ತೊಂದು ವಾಕ್ಯಕ್ಕೆ ಎಡೆಮಾಡಿಕೊಡಬಹುದು. ಆದ್ದರಿಂ

1. ಇದನ್ನು **'ಅವ್ಯವಹಿತ'** ಅನುಮಾನ ಎಂದೂ ಕರೆಯಬಹುದು.

ದನ್ನು 'ಪ್ರತ್ಯಕ್ಷ' (Immediate) ವೆಂದು ಕರೆದರೆ, ಎರಡನೆಯದನ್ನು 'ಅಪ್ರತ್ಯಕ್ಷ' ಅಥವಾ 'ಪರೋಕ್ಷ' (Mediate) ಎನ್ನುತ್ತಾರೆ.[1] ಇದನ್ನೇ ಇಂಗ್ಲೀಷಿನಲ್ಲಿ 'Syllogism' ಎನ್ನುತ್ತಾರೆ.

ಎಂದರೆ '**ಪ್ರತ್ಯಕ್ಷ ಅನುಮಾನ**'ದಲ್ಲಿ ಗೃಹೀತ ಅಥವಾ ಆಧಾರವಾಕ್ಯ ಒಂದೇ ಇರುತ್ತದೆ. '**ಪರೋಕ್ಷ ಅನುಮಾನ**'ದಲ್ಲಿ ಗೃಹೀತ ವಾಕ್ಯಗಳು ಎರಡಿದ್ದು, ಅವುಗಳ ಸಂಬಂಧ 'ಮಧ್ಯಮ ಪದ'ದಿಂದ ರೂಪಿತವಾಗಿರುತ್ತದೆ.

ಈ ಅಧ್ಯಾಯದಲ್ಲಿ 'ಪ್ರತ್ಯಕ್ಷ ಅನುಮಾನ'ದ ರೂಪ, ನಿಯಮಗಳನ್ನು ತಿಳಿಯಲು ಪ್ರಯತ್ನಪಡೋಣ.

## ೨. ಪ್ರತ್ಯಕ್ಷ ಅನುಮಾನ

'ಪ್ರತ್ಯಕ್ಷ ಅನುಮಾನ' ಎಂದರೇನೆಂಬುದನ್ನು ಮೇಲೆ ನೋಡಿದ್ದೇವೆ. ಈ ತೆರನಾದ ಅನುಮಾನದಲ್ಲಿ ಎರಡು ವಿಧಾನಗಳಿವೆ. 1. ವಿವಕ್ಷಿತ ಅನುಮಾನ (Eduction) ಮತ್ತು 2. ತಾರ್ಕಿಕವಾಕ್ಯಗಳ ವಿರೋಧ ಸಂಬಂಧ (Opposition of propositions) ಇಂಗ್ಲಿಷ್ ಭಾಷೆಯಲ್ಲಿ 'educe' ಎಂದರೆ ಪದದ ಅರ್ಥವನ್ನು ವಿಶದಪಡಿಸು ಎಂದು. ಯಾವುದಾದರೂ ಮಾತಿನ ಅಥವಾ ವಾಕ್ಯದ ಅಂತರಾರ್ಥವನ್ನು ಬೇರೆಯ ಮಾತಿನಲ್ಲಿ ವಿಸ್ತಾರಗೊಳಿಸಿದರೆ ಅದಕ್ಕೆ 'Eduction' ಎನ್ನಬಹುದು. ತರ್ಕದಲ್ಲಿ ಗೃಹೀತವಾಕ್ಯದ ಅಂತರಾರ್ಥವನ್ನು 'ಅನುಮಾನ'ದ ರೀತ್ಯಾ ವಿಸ್ತಾರಗೊಳಿಸಿದರೆ ಅದಕ್ಕೆ '**ವಿವಕ್ಷಿತ ಅನುಮಾನ**' (Eduction) ಎನ್ನುತ್ತಾರೆ.

ಹೀಗೆ 'ವಿವಕ್ಷಿತ-ಅನುಮಾನ' ರೂಪಗಳು ಮುಖ್ಯವಾಗಿ ಎರಡು. ಮೊದಲನೆಯದು '**ಪರಿವರ್ತನೆ**' (Conversion). ಎರಡನೆಯದು '**ಪ್ರತಿವರ್ತನೆ**' (Obversion). ಈ ಎರಡು ಅನುಮಾನಗಳ ತಂತ್ರಗಳನ್ನೇ ಉಪಯೋಗಿಸಿಕೊಂಡು ಗೃಹೀತವಾಕ್ಯದ ಅಂತರಾರ್ಥವನ್ನು ವಿಸ್ತಾರಗೊಳಿಸುತ್ತಾ 'ಸಂಯುಕ್ತ-ವಿವಕ್ಷಿತ-ಅನುಮಾನ' (compound forms of immediate inference) ರೂಪಗಳನ್ನು ಗಳಿಸಬಹುದು. ಅವುಗಳನ್ನು 'ಪರಿಪ್ರತಿವರ್ತನ' (Contraposition) ಮತ್ತು 'ಪ್ರತಿವರ್ತನೆ' (Inversion) ಎಂದು ಕರೆಯುತ್ತಾರೆ. ನಮ್ಮ ಉದ್ದೇಶ '**ವಿವಕ್ಷಿತ-ಅನುಮಾನ**'ದ ಮೊದಲ ಎರಡು ರೂಪಗಳನ್ನು ಮಾತ್ರ ಅಧ್ಯಯನಕ್ಕೆ ತಂದುಕೊಳ್ಳುವುದು.

---

1. ಇದನ್ನು 'ವ್ಯವಹಿತ' ಅನುಮಾನವೆಂದೂ ಕರೆಯುತ್ತಾರೆ.

ಎರಡನೆಯದು 'ತಾರ್ಕಿಕ ವಾಕ್ಯಗಳ ವಿರೋಧ ಸಂಬಂಧ. ಇದು ಏನೆಂಬುದನ್ನು ಮತ್ತೆ ನೋಡೋಣ.

## ಪ್ರತ್ಯಕ್ಷ- ಅನುಮಾನ — 'ವಿವಕ್ಷಣ'
## (Immediate Inference — Eduction)

ಒಂದು ವಾಕ್ಯದ ಆಧಾರದ ಮೇಲೆ ಮತ್ತೊಂದು ವಾಕ್ಯವನ್ನು ಊಹಿಸುವ ವಿಚಾರ-ಕ್ರಮವನ್ನು 'ಅನುಮಾನ'ವೆಂದು ಕರೆದಿದ್ದೇವೆ. ಹೀಗೆ ಊಹಿತವಾದ ವಾಕ್ಯ ಅಥವಾ 'ಅನುಮತಿ'ಯು ಮೊದಲ ವಾಕ್ಯದ ಅರ್ಥಸಂಪತ್ತಿಯನ್ನು ಬೇರೆಯ ರೂಪದಲ್ಲಿ ವ್ಯಕ್ತಪಡಿಸುತ್ತದೆ. ಇಂತಹುದನ್ನು 'ಪ್ರತ್ಯಕ್ಷ-ಅನುಮಾನ' ಎಂದು ಕರೆದು ಆದಕ್ಕೆ ತಾರ್ಕಿಕವಾಗಿ 'ಅನುಮಾನ'ದ ಸ್ಥಾನವನ್ನು ಕೊಡಬಹುದೋ ಅಥವಾ ಒಂದು ವಾಕ್ಯದ ಅರ್ಥವನ್ನು ಬೇರೆ ಬೇರೆ ರೀತಿಯಲ್ಲಿ ಹೇಳಿದರೆ 'ಅನುಮಾನ'ವಾಗುತ್ತದೆಯೋ, ಎನ್ನುವ ಪ್ರಶ್ನೆಗಳು ತಾರ್ಕಿಕರಲ್ಲಿ ಬಂದಿವೆ. ಹಲವರಂತೂ, ಅವರಲ್ಲಿ ಮುಖ್ಯವಾಗಿ ಜಾನ್ ಸ್ಟೂಯರ್ಟ್ ಮಿಲ್ ಮತ್ತು ಅಲೆಕ್ಸಾಂಡರ್ ಬೈನ್ ಎನ್ನುವವರು,ಅಂತಹ 'ಅನುಮಾನ ಕ್ರಿಯೆ'ಯನ್ನು ಕೇವಲ ಉಪಚಾರಕ್ಕಾಗಿ ಮಾತ್ರ 'ಅನುಮಾನ'ವೆಂದು ಕರೆಯಬಹುದೇ ವಿನಾ ಅದರಲ್ಲಿ ಯಾವ 'ಹೊಸತನ'ವೂ ಇಲ್ಲದಿರುವುದರಿಂದ ಅವನ್ನು ವಾಸ್ತವಿಕವಾಗಿ 'ಅನುಮಾನ'ವೆಂದು ಕರೆಯಲು ಬರುವುದಿಲ್ಲ ಎನ್ನುತ್ತಾರೆ. ಆದರೆ ಸಾಂಪ್ರದಾಯಿಕ ವಾಗಿ ಅನುಮಿತ ವಾಕ್ಯವು ಆಧಾರಭೂತವಾಗಿರುವುದರಿಂದ, ಎಂದರೆ ಗೃಹೀತ ವಾಕ್ಯದ ಸತ್ಯವನ್ನೇ ಅನುಸರಿಸುವುದರಿಂದ, ಅದನ್ನೂ 'ಅನುಮಾನ'ವೆಂದು ಪರಿಗಣಿಸಬಹುದೆಂದು ಹೇಳುತ್ತಾರೆ. ಈ ಸಂಪ್ರದಾಯವನ್ನು ಅನುಸರಿಸಿ ನಾವು ಈ ಕೆಳಗೆ 'ವಿವಕ್ಷಿತ-ಅನುಮಾನ'ದ ಎರಡು ರೂಪಗಳಾದ 'ಪರಿವರ್ತನೆ' ಮತ್ತು 'ಪ್ರತಿವರ್ತನೆ' ಎನ್ನುವ ಪ್ರತ್ಯಕ್ಷ ಅನುಮಾನಗಳನ್ನು ತಿಳಿಯಲು ಪ್ರಯತ್ನಪಡೋಣ.

### (a) ಪರಿವರ್ತನೆ

'ಪರಿವರ್ತನೆ' ಒಂದು ಪ್ರತ್ಯಕ್ಷ ಅನುಮಾನದ ಒಂದು ರೂಪ. ಇದರಲ್ಲಿ ಉದ್ದೇಶ್ಯ ಮತ್ತು ವಿಧೇಯ ಪದಗಳ ಸ್ಥಾನಪಲ್ಲಟವಾಗುತ್ತದೆ. ಎಂದರೆ ಗೃಹೀತ ವಾಕ್ಯದಲ್ಲಿ ಉದ್ದೇಶ್ಯಪದ — ವಿಧೇಯಪದ (S — P) ಇದ್ದದ್ದು ನಿರ್ಣಯವಾಕ್ಯ ವಿಧೇಯಪದ-ಉದ್ದೇಶ್ಯಪದ (P — S) ಆಗುತ್ತದೆ.

ಗೃಹೀತ ವಾಕ್ಯವನ್ನು ಈ ಅನುಮಾನ ಕ್ರಿಯೆಯಲ್ಲಿ **'ಪರಿವರ್ತನೀಯ'** ಎಂದೂ, ಅನುಮಿತಿ ಅಥವಾ ನಿರ್ಣಯ ವಾಕ್ಯವನ್ನು **'ಪರಿವರ್ತ್ಯ'** ಎಂದೂ, ಅನುಮಾನಕ್ರಿಯೆಗೆ **'ಪರಿವರ್ತನೆ'** ಎಂದೂ ಕರೆಯುತ್ತಾರೆ.

ಉದಾಹರಣೆಗೆ—

ಮಾನವರು (S) ಮರ್ತ್ಯರು (P) (ಪರಿವರ್ತನೀಯ)

∴ ಮರ್ತ್ಯರು (P) ಮಾನವರು (S) (ಪರಿವರ್ತನೆ)

ಆದರೆ ಹೀಗೆ ಉದ್ದೇಶ್ಯ ಮತ್ತು ವಿಧೇಯಪದಗಳ ಸ್ಥಾನ ಬದಲಾವಣೆಯಾಗ ೕಕಾದರೆ ಈ ಅನುಮಾನದ ರೂಪ ಹಲವು ನಿಯಮಗಳನ್ನು ಪಾಲಿಸಬೇಕು.

1. ಗೃಹೀತವಾಕ್ಯದ 'ಗುಣ'ವೇ ನಿರ್ಣಯವಾಕ್ಯದ 'ಗುಣ'ವಾಗಿರಬೇಕು. ಎಂದರೆ, ಎರಡೂ ಭಾವಾತ್ಮಕವಾಗಿರಬೇಕು ಅಥವಾ ಎರಡೂ ನಿಷೇಧಾತ್ಮಕ ವಾಗಿರಬೇಕು.

2. ಗೃಹೀತ ವಾಕ್ಯದಲ್ಲಿ ಯಾವುದಾದರೂ ಪದ (S ಅಥವಾ P) 'ಅವ್ಯಾಪ್ತ' ವಾಗಿದ್ದರೆ ಅದನ್ನು ನಿರ್ಣಯ ವಾಕ್ಯದಲ್ಲಿ 'ವ್ಯಾಪ್ತ'ಗೊಳಿಸಬಾರದು. ಈ ನಿಯಮದ ಉಲ್ಲಂಘನೆ 'ಕಾರಣರಹಿತ-ವ್ಯಾಪ್ತಿಯ ದೋಷ' (Illicit Process) ಕ್ಕೆ ಒಯ್ಯುತ್ತದೆ.

ಈ ಎರಡು ನಿಯಮಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನಿರಪೇಕ್ಷ ವಾಕ್ಯಗಳ ಪರಿ ರ್ತನೆಯನ್ನು ಮಾಡೋಣ.

1. ಪೂರ್ಣವ್ಯಾಪಕ ಭಾವಾತ್ಮಕ (Universal affirmative)

ಉದಾಹರಣೆಗೆ—

ಎಲ್ಲ ಮಾನವರೂ (S ✓) ಮರ್ತ್ಯರಾಗಿದ್ದಾರೆ (P ×) — ಎಲ್ಲ S (✓) — P (×)

a. ಪರಿವರ್ತನೆಯ ಮೊದಲ ಹಂತ

ಮರ್ತ್ಯರು (P) ಮಾನವರು (S) (P — S)

b. S — P ಗಳ ವ್ಯಾಪ್ತಿಯನ್ನು ಗುರ್ತಿಸುವುದು.

ಮರ್ತ್ಯರು (P ×) ಮಾನವರು (S)

c. ನಿರ್ಣಯವಾಕ್ಯ ಗೃಹೀತ ವಾಕ್ಯದಂತೆ ಭಾವಾತ್ಮಕವಾಗಿರಬೇಕು, ಅಲ್ಲ ಆದರಲ್ಲಿ ಅವ್ಯಾಪ್ತವಾದ 'ಮರ್ತ್ಯ' ಎನ್ನುವ ಪದವನ್ನು ಹಾಗೆಯೇ ಉಳಿಸಬೇಕ ಎಂದರೆ ಈ ಎರಡನ್ನೂ ಪಾಲಿಸಲು 'I' ವಾಕ್ಯವೇ ಶಕ್ತ, ಆದ್ದರಿಂದ.

d. ಪರಿವರ್ತನೆ

×　　　　×

∴ ಹಲವು ಮರ್ತ್ಯರು (P) ಮಾನವರಾಗಿದ್ದಾರೆ (S)

ಹೀಗೆ 'ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ' ಎನ್ನುವುದರಿಂದ 'ಹಲವು ಮರ್ತ್ಯ ಮಾನವರಾಗಿದ್ದಾರೆ' ಎನ್ನುವುದನ್ನು 'ಪರಿವರ್ತನಾ' ಕ್ರಮದಲ್ಲಿ ತರ್ಕಿಸಿದ್ದೇವೆ. ಇದನ ಹೀಗೆ ಹೇಳಬಹುದು.

(i) A ಯ ಪರಿವರ್ತನೆ I, ಅಥವಾ
(ii) SiP ಯ ಪರಿವರ್ತನೆ PiS

**'E' ಪೂರ್ಣವ್ಯಾಪಕ ನಿಷೇಧಾತ್ಮಕ (Universal negative)**

ಉದಾಹರಣೆಗೆ—

√　　　　√

ಯಾವ ತಿರುಕನೂ (S) ಧನವಂತನಲ್ಲ (P)　　S e P

√　　　　√

∴ ಯಾವ ಧನವಂತನೂ (P) ತಿರುಕನಲ್ಲ (S)　　P e S

ಹೀಗೆ (i) E ಯ ಪರಿವರ್ತನೆ E, ಅಥವಾ
(ii) SeP ಯ ಪರಿವರ್ತನೆ SeP

**'I' ಅಪೂರ್ಣವ್ಯಾಪಕ ಭಾವಾತ್ಮಕ (Particular affirmative)**

ಉದಾಹರಣೆಗೆ—

×　　　　×　　　　× ×

ಹಲವು ಹೂಗಳು (S) ಕೆಂಪುವಸ್ತುಗಳಾಗಿವೆ (P)　　SiP

ಕೆಂಪು ವಸ್ತುಗಳು (P) ಹೂವುಗಳು (S)　　P　S

ಪರಿವರ್ತನೆ

∴ ಹಲವು ಕೆಂಪುವಸ್ತುಗಳು (P, ×) ಹೂವುಗಳಾಗಿವೆ (S, ×) P×i S×

ಹೀಗೆ (i) I ಯ ಪರಿವರ್ತನೆ I ; ಅಥವಾ
(ii) SiP ಯ ಪರಿವರ್ತನೆ PiS

**ಅಪೂರ್ಣ ವ್ಯಾಪಕ ನಿಷೇಧಾತ್ಮಕ** — (Particular negative)

ಉದಾಹರಣೆಗೆ—

ಹಲವು ಸೈನಿಕರು (S) ಸಾಹಸಿಗಳಲ್ಲ (P, ×) S o P

1. ಸಾಹಸಿಗಳು (P) ಸೈನಿಕರು (S, ×) P S

2. ಇಲ್ಲಿ ಗೃಹೀತವಾಕ್ಯದ 'ಉದ್ದೇಶಪದ 'ಅವ್ಯಾಪ್ತ' ವಾದ್ದರಿಂದ ನಿರ್ಣಯವಾಕ್ಯದಲ್ಲೂ ಅವ್ಯಾಪ್ತವಾಗಿಯೇ ಉಳಿಯಬೇಕು ಮತ್ತು ಎರಡು ವಾಕ್ಯಗಳಿಗೂ ನಿಯಮದಂತೆ ನಿಷೇಧಾತ್ಮಕವಾಗಿಯೇ ಇರಬೇಕು. ಎಂದರೆ E ಅಥವಾ O ಆಗಿರಬೇಕು. ಈ ಎರಡರಲ್ಲೂ ವಿಧೇಯಪದ ವ್ಯಾಪ್ತವಾಗುವುದರಿಂದ ನಿಯಮವನ್ನು ಉಲ್ಲಂಘಿಸುತ್ತದೆ. ಎಲ್ಲಿ ಅವ್ಯಾಪ್ತ ಪದವನ್ನು ವ್ಯಾಪ್ತಗೊಳಿಸುತ್ತೇವೋ ಅಲ್ಲಿ 'ಕಾರಣ ರಹಿತ ವ್ಯಾಪ್ತಿಯ ದೋಷ' ಎನ್ನುವ ದೋಷವನ್ನು ಎಸಗುತ್ತೇವೆ. ಆದ್ದರಿಂದ O **ತಾರ್ಕಿಕ ವಾಕ್ಯಕ್ಕೆ ಪರಿವರ್ತನೆ ಇರುವುದಿಲ್ಲ.**

ಈಗ ಒಟ್ಟಿನಲ್ಲಿ ಪರಿವರ್ತನೆಗಳು ಹೇಗಿರುತ್ತವೆನ್ನುವುದನ್ನು ನೋಡೋಣ.

1. A—ಪೂರ್ಣವ್ಯಾಪಕ ಭಾವಾತ್ಮಕ ಎಲ್ಲ S – P (ಗೃಹೀತವಾಕ್ಯ)
ಪರಿವರ್ತನೆ ∴ ಕೆಲವು P — S (ನಿರ್ಣಯ)

2. E—ಪೂರ್ಣವ್ಯಾಪಕ ನಿಷೇಧಾತ್ಮಕ ಯಾವೊಂದು S — P ಅಲ್ಲ
(ಗೃಹೀತವಾಕ್ಯ

ಪರಿವರ್ತನೆ ∴ ಯಾವೊಂದು P — S ಅಲ್ಲ (ನಿರ್ಣಯ)

3. I—ಅಪೂರ್ಣವ್ಯಾಪಕ ಭಾವಾತ್ಮಕ ಕೆಲವು S — P (ಗೃಹೀತವಾಕ್ಯ

ಪರಿವರ್ತನೆ ∴ ಕೆಲವು P — S (ನಿರ್ಣಯ)

4. O—ಅಪೂರ್ಣವ್ಯಾಪಕ ನಿಷೇಧಾತ್ಮಕ ಇದಕ್ಕೆ ಪರಿವರ್ತನೆ ಇರುವುದಿಲ್ಲ.

ಈ ಮೇಲಿನ ಪಟ್ಟಿಯನ್ನು ಗಮನಿಸಿದರೆ ನಮಗೆ E ಮತ್ತು I ಗಳ ಪರಿವರ್ತ ಯಲ್ಲಿ ಒಂದು ವೈಶಿಷ್ಟ್ಯ ಕಂಡುಬರುತ್ತದೆ. ಎಂದರೆ E ಯ ಪರಿವರ್ತನೆ E, I ಯ ಪ ವರ್ತನೆ I ; ಆದರೆ A ಯ ಪರಿವರ್ತನೆ I ಆಗಿದೆ. ಪರಿವರ್ತನೆಯಲ್ಲಿ ವಾಕ್ಯ ಬದಲಾವ ಆಗದಿದ್ದರೆ ಅದನ್ನು **'ಸರಳ ಪರಿವರ್ತನೆ'** (Simple Conversion) **ಎನ್ನುತ್ತಾರ** ಎಂದರೆ E ಮತ್ತು I ಗಳ ಪರಿವರ್ತನೆ 'ಸರಳ-ಪರಿವರ್ತನೆ'.

ಆದರೆ A ಯ ಪರಿವರ್ತನೆ A ಆಗದೆ I ಆಗುತ್ತದೆ. ಇಂತಹ ಪರಿವರ್ತನೆ **'ತಾತ್ಕಾಲಿಕ-ಪರಿವರ್ತನೆ'** (Conversion per accidens) **ಎಂದು** ಹೆಸರು ತಾತ್ಕಾಲಿಕ ಪರಿವರ್ತನೆ'ಯಲ್ಲಿ ನಿರ್ಣಯವಾಕ್ಯ ಗುಣದಲ್ಲಿ ಮಾತ್ರ ವ್ಯತ್ಯಾಸ ಹೊಂದ ವುದಿಲ್ಲ. ಪ್ರಮಾಣದಲ್ಲಿ ಮಾತ್ರ ವ್ಯತ್ಯಾಸ ಹೊಂದುತ್ತದೆ. ಎಂದರೆ ಗೃಹೀತವಾಕ ಪೂರ್ಣವ್ಯಾಪಕ ಆಗಿದ್ದರೆ, ನಿರ್ಣಯವಾಕ್ಯ ಅಪೂರ್ಣವ್ಯಾಪಕವಾಗುತ್ತದೆ. ಹೀಗೆ A ಮತ್ತು I ಗಳು ಗುಣದಲ್ಲಿ ಅಭೇದವಾಗಿದ್ದು ಪ್ರಮಾಣ ಅಥವಾ ವ್ಯಾಪಕತೆಯ ಮಾತ್ರ ವ್ಯತ್ಯಾಸ ಹೊಂದಿರುತ್ತವೆ. ಇದೇ ರೀತಿಯಲ್ಲಿ E ಯ ಪರಿವರ್ತನೆ O ಆದರೆ ಯಾವ ಬಾಧಕವೂ ಇರುವುದಿಲ್ಲ. ಆಗ ಅದನ್ನು ತಾತ್ಕಾಲಿಕ-ಪರಿವರ್ತನೆ ಎನ್ನುತ್ತೇವೆ ಆದರೆ ಸಾಮಾನ್ಯವಾಗಿ E ಯ ಪರಿವರ್ತನೆ ಯಾವ ಪರಿವರ್ತನಾ ನಿಯಮವನ್ನೂ ಉಲ್ಲಂಘಿಸದೆ E ಸಾಧ್ಯವಾಗುವುದರಿಂದ ಅದನ್ನು ಸರಳ-ಪರಿವರ್ತನೆ ಮಾಡುತ್ತೇವೆ.

## 'A' ಯ 'ಸರಳ ಪರಿವರ್ತನೆ' ಸಾಧ್ಯವೇ ?

ಸಾಮಾನ್ಯವಾಗಿ A ಯ ಪರಿವರ್ತನೆ ತಾತ್ಕಾಲಿಕ ಪರಿವರ್ತನೆಯಾದರೂ, ಹಲವ ಸಂದರ್ಭಗಳಲ್ಲಿ ಸರಳ-ಪರಿವರ್ತನೆಯೂ ಸಾಧ್ಯವಿದೆ. ಇದು ಸಾಧ್ಯವೆಂದಾದರೆ ಪ ವರ್ತನೆಯ ಯಾವ ನಿಯಮಗಳನ್ನೂ ಉಲ್ಲಂಘಿಸಬೇಕೆಂದಲ್ಲ. ಸಾಮಾನ್ಯವಾಗಿ A ವಾಕ್ಯದ ಉದ್ದೇಶ್ಯ ಮತ್ತು ವಿಧೇಯ ಪದಗಳಲ್ಲಿ, ಎರಡನೆಯದು ಅವ್ಯಾಪ್ತವಾಗುವುದನ ವ್ಯಾಪ್ತಿ ಪ್ರಕರಣದಲ್ಲಿ ನೋಡಿದ್ದೇವೆ. ಪರಿವರ್ತನೆಯ ನಿಯಮದಂತೆ ಗೃಹೀತ ವಾಕ

ಲ್ಲಿ ಯಾವ ಪದ ಅವ್ಯಾಪ್ತವಾಗಿರುತ್ತದೋ ಅದನ್ನು ನಿರ್ಣಯದಲ್ಲಿ ವ್ಯಾಪ್ತಗೊಳಿಸ ಾರದು. ಹಲವು ಸಂದರ್ಭಗಳಲ್ಲಿ ಗೃಹೀತವಾದ A ವಾಕ್ಯದಲ್ಲಿ **ವಿಧೇಯ ಪದವು** ್ಯಾಪ್ತವಾಗಿದ್ದರೆ ಆದರ ಪರಿವರ್ತನೆ 'ಸರಳ-ಪರಿವರ್ತನೆ ಆಗಬಹುದು. ಅಂತಹ ವಿಶಿಷ್ಟ ಮಯಗಳಲ್ಲಿ ಮಾತ್ರ ಇದು ಸಾಧ್ಯ.

ಉದಾಹರಣೆಗೆ—

√ √
ತೇನ್‌ಸಿಂಗ್ (S) ಎವರೆಸ್ಟ್ ಶಿಖರವನ್ನು (P) ಗೆದ್ದನು

(ಇಲ್ಲಿ S ಮತ್ತು P ಗಳು ಎರಡೂ ವ್ಯಾಪ್ತವಾಗಿವೆ. ವ್ಯಾಪ್ತ ಎಂದರೆ ಪದದ ವರ್ಗ ಅಥವಾ ಕ್ಷೇತ್ರವನ್ನು ಪೂರ್ಣವಾಗಿ ತೆಗೆದುಕೊಳ್ಳುವಂತಹುದು. ಸಂಖ್ಯೆಯ ದೃಷ್ಟಿಯಿಂದ ನೋಡಿದರೆ ಉದ್ದೇಶ್ಯವಾಕ್ಯ ಮತ್ತು ವಿಧೇಯ ವಾಕ್ಯಗಳು ಸಮಾನವಾಗಿದೆ. ಆದ್ದರಿಂದ ಪರಿವರ್ತನೆ ಹೀಗಿರುತ್ತದೆ.)

√ √
ಎವರೆಸ್ಟ್ ಶಿಖರವನ್ನು (P) ಗೆದ್ದವನು ತೇನ್‌ಸಿಂಗ್ (S) P a S

**ೀಷ ಅಧ್ಯಯನ :**

**ಪೇಕ್ಷ ಅಥವಾ ವಿಪರ್ಯಯ ಸಂಬಂಧಗಳ ಪರಿವರ್ತನೆ**
**(Inference by converse relation)**

ಅನೇಕ ಸಲ ಗೃಹೀತವಾಕ್ಯದಲ್ಲಿ ಉದ್ದೇಶ್ಯ ಮತ್ತು ವಿಧೇಯಪದಗಳು ಸಾಪೇಕ್ಷ ಗಳಾಗಿರುತ್ತವೆ.

ಉದಾ : ರಾಮನ ಹೆಂಡತಿ ಸೀತೆ

ಸಾಪೇಕ್ಷ ಸಂಬಂಧವನ್ನು 'ಹೆಂಡತಿ' ಎನ್ನುವ ಪದ ಸೂಚಿಸುತ್ತದೆ. ಇದರ ಪೇಕ್ಷಪದ 'ಗಂಡ'. ಪರಿವರ್ತನೆ ಮಾಡುವಾಗ ಉಚಿತವಾದ ಸಾಪೇಕ್ಷಪದವನ್ನು ತು ನಿರ್ಣಯವಾಕ್ಯವನ್ನು ಮಾಡಬೇಕು. ಇಲ್ಲಿ

'ಸೀತೆಯ ಗಂಡ ರಾಮ' ಆಗುತ್ತದೆ. ಇಂತಹ ಪರಿವರ್ತನೆಗೆ 'ಸಾಪೇಕ್ಷ-ಸಂಬಂಧ ವರ್ತನೆ' ಎಂದು ಹೆಸರು.

## (b) 'ಪ್ರತಿವರ್ತನೆ' (Obversion)

'ಪ್ರತಿವರ್ತನೆ' ಪ್ರತ್ಯಕ್ಷ-ಅನುಮಾನದ ಮತ್ತೊಂದು ರೂಪ. ಇಲ್ಲಿ ಗೃಹೀತ ವಾಕ್ಯದ 'ಗುಣ'ವನ್ನು ನಿರ್ಣಯ ವಾಕ್ಯದಲ್ಲಿ ಬದಲಾಯಿಸುತ್ತೇವೆ. ಆದರೂ ವಾಕ್ಯದ ಅರ್ಥ ಬದಲಾಗಬಾರದು. ಎಂದರೆ ಭಾವಾತ್ಮಕ ವಾಕ್ಯಕ್ಕೆ ಅರ್ಥದಲ್ಲಿ ಸಮಾನವಾದಂತ ನಿಷೇಧಾತ್ಮಕ ವಾಕ್ಯವನ್ನೂ, ನಿಷೇಧಾತ್ಮಕ ವಾಕ್ಯಕ್ಕೆ ಭಾವಾತ್ಮಕ ವಾಕ್ಯವನ್ನೂ ನಿರ್ಣಯದಲ್ಲಿ ತರುತ್ತೇವೆ.

### ಪ್ರತಿವರ್ತನೆಯ ನಿಯಮಗಳು

1. ಗೃಹೀತ ವಾಕ್ಯ ಮತ್ತು ನಿರ್ಣಯ ವಾಕ್ಯಗಳ ಉದ್ದೇಶ್ಯಪದ ಒಂದೆ ಇರಬೇಕು.
2. ನಿರ್ಣಯ ವಾಕ್ಯದ ವಿಧೇಯಪದವು ಗೃಹೀತ ವಾಕ್ಯದ ವಿಧೇಯಪದದ ವ್ಯಾಘಾತಕ ರೂಪವಾಗಿರಬೇಕು.
3. ನಿರ್ಣಯ ವಾಕ್ಯದ ಗುಣ ಗೃಹೀತ ವಾಕ್ಯದ ಗುಣಕ್ಕೆ ವಿರೋಧವಾಗಿ ಬೇಕು.

[ಸೂಚನೆ : ವ್ಯಾಘಾತಕ ರೂಪವನ್ನು ನಿಷೇಧಾತ್ಮಕ ಚಿಹ್ನೆಯಾ '—' ಎಂಬುದರ ಬಳಕೆಯಿಂದ ತೋರಿಸುತ್ತೇವೆ.]

ಈ ಅನುಮಾನ ಕ್ರಿಯೆಯಲ್ಲಿ ಗೃಹೀತ ವಾಕ್ಯವನ್ನು 'ಪ್ರತಿವರ್ತನೀಯ (Obvertend) ಎಂದೂ, ನಿರ್ಣಯ ವಾಕ್ಯವನ್ನು 'ಪ್ರತಿಪಕ್ಷ' (Obverse) ಎಂದು ಅನುಮಾನ ಕ್ರಿಯೆಯನ್ನು 'ಪ್ರತಿವರ್ತನೆ' (Obversion) ಎಂದೂ ಕರೆಯುತ್ತಾರೆ.

ಉದಾಹರಣೆ : ಮೊದಲಹಂತ :

ಗೃಹೀತ ವಾಕ್ಯ — $S-\overline{P}$ (ಪ್ರತಿವರ್ತನೀಯ)

∴ ನಿರ್ಣಯ ವಾಕ್ಯ — $S\overline{-}P$ (ಪ್ರತಿಪಕ್ಷ)

ಎರಡನೆಯ ಹಂತ 'ಗುಣ'ದ ದೃಷ್ಟಿಯಿಂದ

ಭಾವಾತ್ಮಕ — S — P

∴ ನಿಷೇಧಾತ್ಮಕ — $S - \overline{P}$

ಈಗ A E I O ವಾಕ್ಯಗಳ ಪ್ರತಿವರ್ತನೆಗಳನ್ನು ನೋಡೋಣ.

**'A' ಯ ಪ್ರತಿವರ್ತನೆ**

ಉದಾಹರಣೆ—

ಎಲ್ಲ ಮಾನವರೂ (S) ಮರ್ತ್ಯರಾಗಿದ್ದಾರೆ (P). — S a P

∴ ಯಾವ ಮಾನವನೂ (S) ಅಮರ್ತ್ಯನಲ್ಲ ($\bar{P}$) — S e $\bar{P}$

'A' ಯ ಪ್ರತಿವರ್ತನೆ E

**'E' ಯ ಪ್ರತಿವರ್ತನೆ**

ಉದಾಹರಣೆ—

ಯಾವ ಕುಟಿಲನೂ (S) ಸತ್ಯವಂತನಲ್ಲ (P) — S e P

∴ ಎಲ್ಲ ಕುಟಿಲರೂ (S) ಅಸತ್ಯವಂತರು ($\bar{P}$) — S a $\bar{P}$

E ಯ ಪ್ರತಿವರ್ತನೆ A

**'I' ಯ ಪ್ರತಿವರ್ತನೆ**

ಉದಾಹರಣೆ—

ಹಲವು ವಿದ್ಯಾರ್ಥಿಗಳು (S) ಪ್ರತಿಭಾವಂತರು (P) — S i P

∴ ಹಲವು ವಿದ್ಯಾರ್ಥಿಗಳು (S) ಅಪ್ರತಿಭಾವಂತರಲ್ಲ ($\bar{P}$) — S o $\bar{P}$

I ಯ ಪ್ರತಿವರ್ತನೆ O

**'O' ನ ಪ್ರತಿವರ್ತನೆ**

ಉದಾಹರಣೆ—

ಹಲವು ಮಾನವರು (S) ದಯಾವಂತರಲ್ಲ (P) S o P

∴ ಹಲವು ಮಾನವರು (S) ನಿರ್ದಯರು ($\bar{P}$) S i $\bar{P}$

O ನ ಪ್ರತಿವರ್ತನೆ I

**ಈಗ ಪ್ರತಿವರ್ತನೆಗಳ ಸಾರಾಂಶ**

A ಯ ಪ್ರತಿವರ್ತನೆ —E : S e $\overline{P}$
E ಯ ಪ್ರತಿವರ್ತನೆ —A : S a $\overline{P}$
I ಯ ಪ್ರತಿವರ್ತನೆ —O : S o $\overline{P}$
O ನ ಪ್ರತಿವರ್ತನೆ – I : S i $\overline{P}$

**ವಿಶೇಷ ಅಧ್ಯಯನ :**

**ವಸ್ತು-ಸಂವಾದಿ ಪ್ರತಿವರ್ತನೆ** (Material obversion)

ಹಲವು ಸಲ ತಾರ್ಕಿಕ ಪ್ರತಿವರ್ತನೆಯ ನಿಯಮುಗಳನ್ನು ಪಾಲಿಸದೆ ಪ್ರಾಪಂಚ ಜ್ಞಾನವನ್ನು ಹೊಂದಿಕೊಂಡು ಪ್ರತಿವರ್ತನೆಯನ್ನು ಮಾಡಬಹುದು. ಇಂತಹ ಅ ಮಾನಕ್ಕೆ 'ವಸ್ತು-ಸಂವಾದಿ ಪ್ರತಿವರ್ತನೆ' ಎನ್ನುತ್ತಾರೆ.

ಉದಾ : 1. ಬಿಸಿನೀರು ಹಿತಕರ
∴ ತಣ್ಣೀರು ಅಹಿತಕರ
2. ಯುದ್ಧ ಕೆಡಕನ್ನು ಮಾಡುತ್ತದೆ
∴ ಶಾಂತಿ ಒಳಿತನ್ನು ಮಾಡುತ್ತದೆ.

ಇಲ್ಲಿ ವಿಧೇಯಪದದಲ್ಲಿ ನಿರ್ಣಯವಾಕ್ಯವು ವ್ಯಾಘಾತಕ ರೂಪವನ್ನು ಕೊಟ್ಟರ ಉದ್ದೇಶ್ಯ ಪದನನ್ನು ಬದಲಾಯಿಸಿವೆ. ಇಲ್ಲಿ ತಾರ್ಕಿಕ ಪ್ರತಿವರ್ತನೆಯ ನಿಯಮವನ ಉಲ್ಲಂಘಿಸಿದರೂ ಸಾಮಾನ್ಯ ಪ್ರಾಪಂಚಿಕ ಜ್ಞಾನದ ಆಧಾರದ ಮೇಲೆ ವಾಕ್ಯದ ಅ ವ್ಯತ್ಯಾಸ ಹೊಂದುವುದಿಲ್ಲ. ಈ ರೀತಿಯ ಪ್ರತಿವರ್ತನೆಯನ್ನು ಅಲೆಕ್ಸಾಂಡರ್ ಬೈ ಎನ್ನುವವನು ಹೇಳಿರುವುದರಿಂದ ಇದಕ್ಕೆ ಬೈನ್ಸ್‌ನ 'ವಸ್ತು-ಸಂವಾದಿ ಪ್ರತಿವರ್ತ ಎನ್ನುತ್ತಾರೆ.

## ತಾರ್ಕಿಕ ವಾಕ್ಯಗಳು ಮತ್ತು ಅವುಗಳ 'ವಿರೋಧ ಸಂಬಂಧ' (Opposition of Propositions)

ನಿರಪೇಕ್ಷ ತಾರ್ಕಿಕ ವಾಕ್ಯಗಳು ನಾಲ್ಕು ರೀತಿಯಲ್ಲಿವೆ ಎಂದು ನಾವು ಅರಿತಿದ್ದೇ ಇವು

1. ಪೂರ್ಣವ್ಯಾಪಕ ಭಾವಾತ್ಮಕ — A
2. ಪೂರ್ಣವ್ಯಾಪಕ ನಿಷೇಧಾತ್ಮಕ — E
3. ಅಪೂರ್ಣವ್ಯಾಪಕ ಭಾವಾತ್ಮಕ — I
4. ಅಪೂರ್ಣವ್ಯಾಪಕ ನಿಷೇಧಾತ್ಮಕ — O

ಇವುಗಳು ಪರಸ್ಪರ ವ್ಯತ್ಯಾಸ ಹೊಂದಲು ಕಾರಣ ಅವುಗಳಲ್ಲಿರುವ ಗುಣ ಮತ್ತು ್ಯಾಪ್ತಿ ಅಥವಾ ಪ್ರಮಾಣಗಳಲ್ಲಿನ ವ್ಯತ್ಯಾಸ. ಈ ವ್ಯತ್ಯಾಸಗಳೇ ಅವುಗಳನ್ನು ಪರಸ್ಪರ ರೋಧ'ದ ನೆಲೆಯಲ್ಲಿ ನಿಲ್ಲಿಸುತ್ತವೆ. ಎಂದರೆ ಇವುಗಳಲ್ಲಿ ಯಾವುದಾದರೂ ಎರಡು ರ್ಕಿಕ ವಾಕ್ಯಗಳಲ್ಲಿ ಉದ್ದೇಶ್ಯಪದ ಮತ್ತು ವಿಧೇಯ ಪದಗಳು ಒಂದೇ ಆಗಿದ್ದರೂ ುಗಳ ಗುಣ ಮತ್ತು ಪ್ರಮಾಣಗಳ ಅಂತರದಿಂದ ಒಂದು ರೀತಿಯ 'ವಿರೋಧ ಬಂಧ' ಏರ್ಪಡುತ್ತದೆ. ಇಲ್ಲಿ ಪಾರಿಭಾಷಿಕವಾಗಿ 'ಸಂಬಂಧ' ಎನ್ನುವುದು ರೋಧ'ವೂ ಆಗಿರಬಹುದು ಎನ್ನುತ್ತಾರೆ. ಸಂಬಂಧ 'ಅನ್ಯೋನ್ಯ'ವೇ ಅಲ್ಲ, 'ವಿರೋಧ ಬಂಧ'ವೂ 'ಸಂಬಂಧ'ವೇ. ತಾರ್ಕಿಕ ವಾಕ್ಯಗಳಲ್ಲಿ ಈ 'ವಿರೋಧ ಸಂಬಂಧ 'ಹೇಗಿ'ರು ೆಂಬುದನ್ನು ತಿಳಿಯೋಣ.

'ವಿರೋಧ ಸಂಬಂಧ' ವನ್ನು ತಾರ್ಕಿಕರು ಈ ರೀತಿ ನಿರೂಪಿಸುತ್ತಾರೆ: ಎರಡು ರ್ಕಿಕ ವಾಕ್ಯಗಳು ಒಂದೇ ಉದ್ದೇಶ್ಯಪದವನ್ನೂ, ವಿಧೇಯ ಪದವನ್ನೂ ಹೊಂದಿದ್ದು



ಗುಣದಲ್ಲಿ **ಅಥವಾ** ಪ್ರಮಾಣದಲ್ಲಿ, ಅಥವಾ ಗುಣ **ಮತ್ತು** ಪ್ರಮಾಣಗಳಲ್ಲಿ ಅಂತ ವನ್ನು ಹೊಂದಿದ್ದರೆ 'ವಿರೋಧ ಸಂಬಂಧ' ವನ್ನು ಹೊಂದಿರುತ್ತವೆ. ಅಂತಹ 'ವಿರೋ ಸಂಬಂಧ' ಗಳು ನಾಲ್ಕು ಬಗೆಯಲ್ಲಿ ಇರಬಹುದು. ಇವನ್ನು '**ಚಚ್ಚೌಕ**'ದ ಮೂಲ ತೋರಿಸಬಹುದು. ವಿರೋಧ ಸಂಬಂಧಗಳನ್ನು ಸೂಚಿಸುವ ಚಚ್ಚೌಕಕ್ಕೆ '**ವಿರೋ ಸಂಬಂಧಗಳ ಚಚ್ಚೌಕ**' ಎನ್ನುತ್ತಾರೆ (ಚಿತ್ರ ನೋಡಿ).

ಈ ಚಚ್ಚೌಕದಿಂದ ಈ ಕೆಳಗಿನ '**ವಿರೋಧ ಸಂಬಂಧ**' ಗಳನ್ನು ಗುರುತಿ ಬಹುದು.

1. ಎರಡು ತಾರ್ಕಿಕ ವಾಕ್ಯಗಳು ಒಂದೇ ಉದ್ದೇಶ್ಯ ಮತ್ತು ವಿಧೇಯ ಪ ಗಳನ್ನು ಹೊಂದಿದ್ದು—

   ಪೂರ್ಣವ್ಯಾಪಕವಾಗಿದ್ದು, ಗುಣದಲ್ಲಿ ಮಾತ್ರ ವ್ಯತಾಸ ಹೊಂದಿದ್ದ (ಎಂದರೆ A ಮತ್ತು E)

   ಅವುಗಳ 'ವಿರೋಧ-ಸಂಬಂಧ'ಕ್ಕೆ '**ವಿಪರೀತ-ವಿರೋಧ-ಸಂಬಂ** (Contrary opposition) ಎಂದು ಹೆಸರು. ಅವು ಪರಸ್ಪರ 'ವಿಪರೀತ ವಿರೋಧಿ'ಗಳು.

2. ಎರಡು ತಾರ್ಕಿಕ ವಾಕ್ಯಗಳು ಒಂದೇ ಉದ್ದೇಶ್ಯ ಮತ್ತು ವಿಧೇಯ ಪ ಗಳನ್ನು ಹೊಂದಿದ್ದು—

   ಅಪೂರ್ಣವ್ಯಾಪಕವಾಗಿದ್ದು, ಗುಣದಲ್ಲಿ ಮಾತ್ರ ವ್ಯತ್ಯಾಸ ಹೊಂದಿದ್ದ (ಎಂದರೆ, I ಮತ್ತು O)

   ಅವುಗಳ 'ವಿರೋಧ-ಸಂಬಂಧ'ಕ್ಕೆ '**ಅನು-ವಿಪರೀತ-ವಿರೋ ಸಂಬಂಧ**' (Sub contrary opposition) ಎಂದು ಹೆಸರು. ಅ ಪರಸ್ಪರ 'ಅನು-ವಿಪರೀತ-ವಿರೋಧಿ'ಗಳು.

3. ಎರಡು ತಾರ್ಕಿಕ ವಾಕ್ಯಗಳು ಒಂದೇ ಉದ್ದೇಶ್ಯ ಮತ್ತು ವಿಧೇಯ ಪ ಗಳನ್ನು ಹೊಂದಿದ್ದು—

   ಒಂದು ಪೂರ್ಣವ್ಯಾಪಕವಾಗಿದ್ದು ಮತ್ತೊಂದು ಅಪೂರ್ಣವ್ಯಾ ವಾಗಿದ್ದು ಒಂದೇ ಗುಣವನ್ನು ಹೊಂದಿದ್ದರೆ (ಎಂದರೆ A ಮತ್ತು I ; E ಮತ್ತು O)

ಅವುಗಳ 'ವಿರೋಧ-ಸಂಬಂಧ'ಕ್ಕೆ '**ಉಪಾಶ್ರಿತ ವಿರೋಧ ಸಂಬಂಧ**' (Sub-altern opposition) ಎಂದು ಹೆಸರು. ಅವು ಪರಸ್ಪರ 'ಉಪಾಶ್ರಿತ' ವಿರೋಧಿ'ಗಳು.

4. ಎರಡು ತಾರ್ಕಿಕ ವಾಕ್ಯಗಳು ಒಂದೇ ಉದ್ದೇಶ್ಯ ಮತ್ತು ವಿಧೇಯ ಪದಗಳನ್ನು ಹೊಂದಿದ್ದು—

   ಗುಣ ಮತ್ತು ವ್ಯಾಪ್ತಿ ಅಥವಾ ಪ್ರಮಾಣಗಳೆರಡರಲ್ಲೂ ವ್ಯತ್ಯಾಸ ಹೊಂದಿದ್ದರೆ
   (ಎಂದರೆ A ಮತ್ತು O ; E ಮತ್ತು I)

   ಅವುಗಳ 'ವಿರೋಧ-ಸಂಬಂಧ'ಕ್ಕೆ '**ವ್ಯಾಘಾತಕ-ವಿರೋಧ ಸಂಬಂಧ**' (Contradictory opposition) ಎಂದು ಹೆಸರು. ಅವು ಪರಸ್ಪರ 'ವ್ಯಾಘಾತಕ ವಿರೋಧಿ' ಗಳು.

**ವಿರೋಧ-ಸಂಬಂಧಗಳು — ಪ್ರತ್ಯಕ್ಷ ಅನುಮಾನಗಳು ಹೇಗೆ ?**

ಮೇಲೆ ಹೇಳಿರುವಂತೆ ವಿರೋಧ ಸಂಬಂಧಗಳು ಹೀಗಿರುತ್ತವೆ:

| | |
|---|---|
| 1. A ಮತ್ತು E ಗಳ ನಡುವೆ | 'ವಿಪರೀತ-ವಿರೋಧ' |
| 2. A ಮತ್ತು I ಗಳ ನಡುವೆ<br>3. E ಮತ್ತು O ಗಳ ನಡುವೆ | 'ಉಪಾಶ್ರಿತ-ವಿರೋಧ' |
| 4. I ಮತ್ತು O ಗಳ ನಡುವೆ | 'ಅನು-ವಿಪರೀತ ವಿರೋಧ' |
| 5. A ಮತ್ತು O ಗಳ ನಡುವೆ<br>6. E ಮತ್ತು I ಗಳ ನಡುವೆ | 'ವ್ಯಾಘಾತಕ ವಿರೋಧ' |

ಹೀಗೆ 'ವಿರೋಧ'ಗಳನ್ನೇ ಹೇಳುವುದಾದರೆ ಯಾವ 'ಪ್ರತ್ಯಕ್ಷ ಅನುಮಾನ'ವೂ ...ವುದಿಲ್ಲ. ಏಕೆಂದರೆ ಎಲ್ಲ 'ಅನುಮಾನ'ಗಳಲ್ಲೂ ಒಂದು ವಾಕ್ಯದಿಂದ ಮತ್ತೊಂದು ...ಕ್ಯವನ್ನು ಊಹಿಸಬೇಕಾಗುತ್ತದೆ. ಆದರೆ ಮೇಲೆ ಹೇಳಿರುವ ರೀತಿಯಲ್ಲಿ ಅವುಗಳ ...ಸ್ಪರ ಸಂಬಂಧವನ್ನು ಹೇಳಿದ್ದೇವೆಯೇ ಹೊರತು ಯಾವ ಒಂದು ವಾಕ್ಯವನ್ನೂ ...ರ್ಣಯ'ವೆಂಬಂತೆ ಮತ್ತೊಂದರಿಂದ ಊಹಿಸಿಲ್ಲ. ಆದ್ದರಿಂದ ಕೇವಲ ವಿರೋಧ-...ಬಂಧಗಳು 'ಅನುಮಾನ' ವಾಗುವುದಿಲ್ಲ.

ಆದರೆ 'ವಿರೋಧ-ಸಂಬಂಧ'ಗಳನ್ನು 'ಪ್ರತ್ಯಕ್ಷ ಅನುಮಾನ'ದ ರೂಪದಲ್ಲಿ ಕಾಣ...ಕಾದರೆ, ಅದಕ್ಕೇ ಬೇರೆ ನಿಯಮವಿದೆ.

ಎಂದರೆ, 'ವಿರೋಧ–ಸಂಬಂಧ–ಚೌಕ' ದಲ್ಲಿರುವ ಯಾವುದೇ ವಾಕ್ಯವನ್ನು 'ಸತ್ಯ'ವೋ 'ಅಸತ್ಯ'ವೋ ಎಂದು ಕಲ್ಪಿಸಿಕೊಂಡು, ವಿರೋಧ-ಸಂಬಂಧವನ್ನು ಹೊಂದಿರುವ ಮತ್ತೊಂದು ವಾಕ್ಯ 'ಸತ್ಯ'ವಾಗುತ್ತದೆಯೇ ಅಥವಾ 'ಅಸತ್ಯ'ವಾಗುತ್ತದೆಯೇ ಎನ್ನುವುದನ್ನು ಊಹಿಸಿದರೆ ಮಾತ್ರ, 'ಅನುಮಾನ'ದ ರೂಪವನ್ನು ತಾಳುತ್ತದೆ.

ಅಥವಾ ಒಂದು ವಾಕ್ಯದ 'ಸತ್ಯ' 'ಅಸತ್ಯ' ಗಳನ್ನು ಗೃಹೀತವಾಗಿ ತೆಗೆದುಕೊಂಡು ವಿರೋಧ-ಸಂಬಂಧವನ್ನು ಪಡೆದ ಮತ್ತೊಂದು ವಾಕ್ಯದ 'ಸತ್ಯ' 'ಅಸತ್ಯ'ಗಳನ್ನು ನೇರವಾಗಿ ಊಹಿಸಬೇಕು. ಇಲ್ಲಿ ಈ ಪ್ರಯತ್ನ ಮಾಡೋಣ.

**1. ವಿಪರೀತ ವಿರೋಧ ವಾಕ್ಯಗಳು : A — E**

A — ಎಲ್ಲ ಮಾನವರೂ ಮರ್ತ್ಯರು — ಇದನ್ನು 'ಸತ್ಯ'ವೆಂದು ಗ್ರಹಿಸೋಣ |
E — ಯಾವ ಮಾನವನೂ ಅಮರ್ತ್ಯನಲ್ಲ ∴ E — 'ಅಸತ್ಯ' ಆಗುತ್ತದೆ ↓

A ಯ 'ಸತ್ಯ' ಗೃಹೀತವಾದರೆ, ಆದರಿಂದ
E ಯ 'ಅಸತ್ಯ' ಅನುಮಿತಿಯಾಗುತ್ತದೆ.

ಹಾಗೆಯೇ

E — ಯಾವ ಯಂತ್ರವೂ ಜೀವಂತವಾಗಿಲ್ಲ — 'ಸತ್ಯ' |
A — ಎಲ್ಲ ಯಂತ್ರಗಳೂ ಜೀವಂತವಾಗಿವೆ ∴ 'ಅಸತ್ಯ' ↓

ಮೇಲಿನಂತೆಯೇ E ಯ 'ಸತ್ಯ' ಗೃಹೀತವಾದರೆ
ಆದರಿಂದ A ಯ 'ಅಸತ್ಯ' ವನ್ನು ಊಹಿಸಬಹುದು

ಆದರೆ A ಮತ್ತು E ಅಥವಾ E ಮತ್ತು A ಗಳಲ್ಲಿ ಮೊದಲವಾಕ್ಯ 'ಅಸತ್ಯ' ವೆಂದು ಗ್ರಹಿಸಿದರೆ ಎರಡನೆಯದು 'ಸಂಶಯಾತ್ಮಕ' ವಾಗುತ್ತದೆ. ಸತ್ಯವೋ ಅಸತ್ಯವೋ ಎಂದು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ.

**2. ಉಪಾಶ್ರಿತ ವಿರೋಧ ವಾಕ್ಯಗಳು : A — I ಮತ್ತು E — O**

A ಎಲ್ಲ ವಿದ್ಯಾರ್ಥಿಗಳು ಅರ್ಹರಾಗಿದ್ದಾರೆ — 'ಸತ್ಯ' |
I ಹಲವು ವಿದ್ಯಾರ್ಥಿಗಳು ಅರ್ಹರಾಗಿದ್ದಾರೆ — ∴ 'ಸತ್ಯ' ↓

ಹಾಗೆಯೇ,

E ಯಾವ ದೇಶವೂ ಪ್ರಜಾಹೀನವಾಗಿಲ್ಲ — 'ಸತ್ಯ' |
O ಹಲವು ದೇಶಗಳು ಪ್ರಜಾಹೀನವಾಗಿಲ್ಲ — ∴ 'ಸತ್ಯ' ↓

A — I ಮತ್ತು E — O ಗಳ ಸಂಬಂಧ 'ಉಪಾಶ್ರಿತ'ವಾದದ್ದರಿಂದ ಪೂರ್ಣ ಪಕ ವಾಕ್ಯ 'ಸತ್ಯ'ವಾದಲ್ಲಿ ಅದರ ಕ್ಷೇತ್ರದಲ್ಲೇ ಇರುವ ಎಲ್ಲ ಅಂಶ ಅಥವಾ ವ್ಯಕ್ತಿ ೂ ಅದೇ 'ಸತ್ಯ' ಅನ್ವಯಿಸುತ್ತದೆ. ಆದ್ದರಿಂದ 'ಉಪಾಶ್ರಿತ' ಸಂಬಂಧ ವಾಕ್ಯ ್ಲ ಪೂರ್ಣವ್ಯಾಪಕವಾಕ್ಯ 'ಸತ್ಯ' ವಾದರೆ ಮತ್ತೊಂದರ 'ಸತ್ಯ'ವನ್ನು ಊಹಿಸ ುದು.

ಈಗ 'ಉಪಾಶ್ರಿತ' ಸಂಬಂಧದಲ್ಲಿ 'ಅಪೂರ್ಣವ್ಯಾಪಕ' ವಾಕ್ಯದ 'ಸತ್ಯ'ವನ್ನು ೀತವಾಗಿ ತೆಗೆದುಕೊಂಡರೆ, ಸಂಬಂಧಪಟ್ಟ ಪೂರ್ಣವ್ಯಾಪಕ ವಾಕ್ಯದ ಸತ್ಯ ಅಥವಾ ತ್ಯಗಳನ್ನು ಹೇಗೆ ಊಹಿಸಬಹುದೆಂದು ನೋಡೋಣ.

| | | | | |
|---|---|---|---|---|
| I | ಹಲವು ನದಿಗಳು ತುಂಬಿ ಹರಿಯುತ್ತಿವೆ | — | ಸತ್ಯ | \| |
| A | ಎಲ್ಲಾ ನದಿಗಳೂ ತುಂಬಿ ಹರಿಯುತ್ತಿವೆ | — | ∴ ಸಂಶಯಾತ್ಮಕ | ↓ |

ಹಾಗೆಯೇ

| | | | | |
|---|---|---|---|---|
| O | ಹಲವು ಹಣ್ಣುಗಳು ರುಚಿಯಾಗಿಲ್ಲ | — | ಸತ್ಯ | \| |
| E | ಯಾವ ಹಣ್ಣುಗಳೂ ರುಚಿಯಾಗಿಲ್ಲ | — | ∴ ಸಂಶಯಾತ್ಮಕ | ↓ |

ಉಪಾಶ್ರಿತ ಸಂಬಂಧದಲ್ಲಿ ಮೊದಲವಾಕ್ಯ 'ಅಪೂರ್ಣವ್ಯಾಪಕ' ವಿದ್ದಲ್ಲಿ ಸಂಬಂಧ ಪೂರ್ಣವ್ಯಾಪಕ ವಾಕ್ಯದ ಸತ್ಯಾಸತ್ಯಗಳನ್ನು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ರಿಂದ ಅದು 'ಸಂಶಯಾತ್ಮಕ' ಆಗುತ್ತದೆ.

ಆದರೆ, ಅಪೂರ್ಣವ್ಯಾಪಕ ವಾಕ್ಯವನ್ನು 'ಅಸತ್ಯ'ವೆಂದು ಗ್ರಹಿಸಿದರೆ, ಸಂಬಂಧ ಪೂರ್ಣವ್ಯಾಪಕ ವಾಕ್ಯ 'ಅಸತ್ಯ'ವೇ ಆಗುತ್ತದೆ. ಏಕೆಂದರೆ ಒಂದು 'ಅಂಶ' ವಾ 'ಭಾಗ'ದ ವಿಚಾರದಲ್ಲಿ ಯಾವುದು ಸತ್ಯವಲ್ಲವೋ ಆ 'ವರ್ಗ'ದ ವಿಚಾರದಲ್ಲೂ ್ಯವೇ ಪ್ರಕಟಗೊಳ್ಳುತ್ತದೆ.

ಉದಾಹರಣೆ—

| | | | | |
|---|---|---|---|---|
| I | ಹಲವು ಮಾನವರು ಸತ್ಯವಂತರು | — | 'ಅಸತ್ಯ' | \| |
| A | ಎಲ್ಲ ಮಾನವರೂ ಸತ್ಯವಂತರು | — | ∴ 'ಅಸತ್ಯ' | ↓ |

ಹಾಗೆಯೇ

| | | | | |
|---|---|---|---|---|
| O | ಹಲವು ಜೀವಿಗಳಿಗೆ ಕಾಲುಗಳಿಲ್ಲ | — | 'ಅಸತ್ಯ' | \| |
| E | ಯಾವ ಜೀವಿಗಳಿಗೂ ಕಾಲುಗಳಿಲ್ಲ | — | ∴ 'ಅಸತ್ಯ' | ↓ |

### 3. ಅನು-ವಿಪರೀತ ವಿರೋಧ ವಾಕ್ಯಗಳು I — O

I ಹಲವು ಸಮಸ್ಯೆಗಳನ್ನು ಎದುರಿಸಬಹುದು — 'ಸತ್ಯ' |
O ಹಲವು ಸಮಸ್ಯೆಗಳನ್ನು ಎದುರಿಸಲಾಗದು — ∴ 'ಸಂಶಯಾತ್ಮಕ' ↓

ಇವುಗಳಲ್ಲಿ ಒಂದು 'ಸತ್ಯ'ವಾದರೆ, ಮತ್ತೊಂದೂ ಏಕೆ 'ಸತ್ಯ'ವಾಗಬಾರದು ಅಥವಾ 'ಅಸತ್ಯ'ವಾಗಬಾರದು ? ಎರಡಕ್ಕೂ ಅವಕಾಶವಿದೆ. ಆದ್ದರಿಂದ ನಿಶ್ಚಯ ನಿರ್ಣಯ ಮಾಡಲು ಬರುವುದಿಲ್ಲ. ಎಂದರೆ ಅವನ್ನು 'ಸಂಶಯಾತ್ಮಕ'ವೆನ್ನುತ್ತೇವೆ ವಾಕ್ಯಗಳನ್ನು ತಿರುಗಿಸಿದರೂ, ಎಂದರೆ O — I, ಆದರೂ ಇದೇ ಅನ್ವಯಿಸುತ್ತದೆ.

ಆದರೆ ಈ ವಾಕ್ಯಗಳಲ್ಲಿ ಮೊದಲದನ್ನು 'ಅಸತ್ಯ'ವೆಂದು ಗೃಹೀತವಾಗಿ ತೆಗೆದು ಕೊಂಡರೆ, ಎರಡನೆಯದು 'ಸತ್ಯ' ಆಗುತ್ತದೆ.

I ಹಲವು ವಸ್ತುಗಳು ತೂಕವಾಗಿವೆ — 'ಅಸತ್ಯ' |
O ಹಲವು ವಸ್ತುಗಳು ತೂಕವಾಗಿಲ್ಲ — ∴ 'ಸತ್ಯ' ↓

ಹಾಗೆಯೆ — O 'ಅಸತ್ಯ'ವಾದರೆ I 'ಸತ್ಯ'ವಾಗುತ್ತದೆ.

### 4. ವ್ಯಾಘಾತಕ ವಿರೋಧ ವಾಕ್ಯಗಳು A — O ಮತ್ತು E — I

ಈ ವಾಕ್ಯಗಳು ಗುಣದಲ್ಲೂ, ಪ್ರಮಾಣದಲ್ಲೂ ತೀರ ವ್ಯತ್ಯಾಸ ಹೊಂದಿರುವುದ ರಿಂದ ಒಂದರ 'ಸತ್ಯ' ಇನ್ನೊಂದನ್ನು 'ಅಸತ್ಯ' ಮಾಡುತ್ತದೆ. ಹಾಗೆಯೇ ಒಂದ 'ಅಸತ್ಯ' ಮತ್ತೊಂದನ್ನು 'ಸತ್ಯ'ವಾಗಿಸುತ್ತದೆ.

ಉದಾಹರಣೆ—

A ಎಲ್ಲ ಖನಿಜಗಳೂ ಭೂಮಿಯಲ್ಲಿ ಸಿಗುವುವು — 'ಸತ್ಯ' |
O ಹಲವು ಖನಿಜಗಳು ಭೂಮಿಯಲ್ಲಿ ಸಿಗುವುದಿಲ್ಲ — ∴ 'ಅಸತ್ಯ' ↓

ಹಾಗೆಯೇ

E ಯಾವ ಮಾನವನೂ ಪೂರ್ಣತೆಯನ್ನು ಹೊಂದಿಲ್ಲ — 'ಸತ್ಯ' |
I ಹಲವು ಮಾನವರು ಪೂರ್ಣತೆಯನ್ನು ಹೊಂದಿದ್ದಾರೆ — ∴ 'ಅಸತ್ಯ' ↓

ಇದನ್ನು ತಿರುಗಿಸಿದರೆ, ಎಂದರೆ A ಮತ್ತು E ಗಳನ್ನು 'ಅಸತ್ಯ' ವೆಂದು ಪರಿ ಗಣಿಸಿದರೆ ಅವುಗಳ ವ್ಯಾಘಾತಕ ವಾಕ್ಯಗಳು 'ಸತ್ಯ'ವಾಗುತ್ತವೆ.

ಇದೇ ರೀತಿಯಲ್ಲಿ O ಮತ್ತು I ಗಳ 'ಸತ್ಯ'ದಿಂದ A ಮತ್ತು E ಗಳ 'ಅಸತ್ಯ' ಸ್ಫುಟಗೊಳ್ಳುತ್ತದೆ; ಹಾಗೆಯೇ ಅವುಗಳ 'ಅಸತ್ಯ'ದಿಂದ A ಮತ್ತು E ಗಳ 'ಸತ್ಯ' ಸ್ಫುಟಗೊಳ್ಳುತ್ತದೆ.

ವಿರೋಧ ಸಂಬಂಧ ಚೌಕಗಳಲ್ಲಿರುವ ವಾಕ್ಯಗಳ ಸತ್ಯ ಮತ್ತು ಅಸತ್ಯಗಳಿಂದ ನುಮಾನದ ರೀತ್ಯಾ ಊಹಿಸಬಹುದಾದ್ದನ್ನು ಈ ಪಟ್ಟಿಯ ಮೂಲಕ ವ್ಯಕ್ತಮಾಡ ಹುದು.

| | ಗೃಹೀತ | A | E | I | O |
|---|---|---|---|---|---|
| 1 | A ಸತ್ಯ | | ಅಸತ್ಯ | ಸತ್ಯ | ಅಸತ್ಯ |
| 2 | A ಅಸತ್ಯ | | ಸಂಶಯ | ಸಂಶಯ | ಸತ್ಯ |
| 3 | E ಸತ್ಯ | ಅಸತ್ಯ | | ಅಸತ್ಯ | ಸತ್ಯ |
| 4 | E ಅಸತ್ಯ | ಸಂಶಯ | | ಸತ್ಯ | ಸಂಶಯ |
| 5 | I ಸತ್ಯ | ಸಂಶಯ | ಅಸತ್ಯ | | ಸಂಶಯ |
| 6 | I ಅಸತ್ಯ | ಅಸತ್ಯ | ಸತ್ಯ | | ಸತ್ಯ |
| 7 | O ಸತ್ಯ | ಅಸತ್ಯ | ಸಂಶಯ | ಸಂಶಯ | |
| 8 | O ಅಸತ್ಯ | ಸತ್ಯ | ಅಸತ್ಯ | ಸತ್ಯ | |

ಇದನ್ನು ವಿದ್ಯಾರ್ಥಿಗಳು ಗಮನಿಸಿದಲ್ಲಿ ವಿರೋಧ-ಸಂಬಂಧದಲ್ಲಿ ಬರುವ ಎಲ್ಲ ಾಕ್ಯಗಳ ಸತ್ಯ ಅಸತ್ಯಗಳನ್ನು ಗೃಹೀತ ಸತ್ಯ ಅಥವಾ ಅಸತ್ಯದಿಂದ ಊಹಿಸಬಹುದು.

## ಅಧ್ಯಾಯ 7

# 'ವ್ಯವಹಿತ' ಅಥವಾ 'ಮಧ್ಯಮಾನುವರ್ತಿ' ಅನುಮಾನ ಪ್ರಕರಣ

## (Syllogism or Mediate Inference)

### A—1. ನಿಗಮನ ಅನುಮಾನದ ಒಂದು ರೂಪ

ನಿಗಮನ ಅನುಮಾನ ಎರಡು ರೀತಿಯಲ್ಲಿರಬಹುದು. ಒಂದು ತಾರ್ಕಿಕ ವಾಕ್ಯದಲ್ಲಿ ಅಡಕವಾಗಿರುವ 'ವಿಚಾರ'ದಿಂದ 'ನೇರವಾಗಿ' ಎಂದರೆ ಬೇರೆ ಯಾವುದರ ಆಧಾರವೂ ಇಲ್ಲದೆಯೇ ಮತ್ತೊಂದು ತಾರ್ಕಿಕ ವಾಕ್ಯವನ್ನು ಊಹಿಸುವಂತಹುದು. ಇದಕ್ಕೆ 'ಪ್ರತ್ಯಕ್ಷ' ಅನುಮಾನ ಎಂದು ಹೆಸರು. ಈ ವಿಚಾರವಾಗಿ ಹಿಂದಿನ ಅಧ್ಯಾಯದಲ್ಲಿ ಓದಿದ್ದೇವೆ. ಎರಡನೆಯದು, ಎರಡು ವಿಚಾರಗಳ ಪರಸ್ಪರ **ಸಂಬಂಧದಿಂದ** ಊಹಿಸಲ್ಪಡುವ ಮತ್ತೊಂದು ವಿಚಾರ. ಎಂದರೆ ಇಲ್ಲಿ ನಿರ್ಣಯವು ಆಧಾರ ವಾಕ್ಯಗಳ ಪರಸ್ಪರ ಸಂಬಂಧದ ಮೇಲೆ ಹೊಂದಿಕೊಂಡಿರುತ್ತದೆ. ಎಂದರೆ ಇದು ಪರೋಕ್ಷವಾದದ್ದು. ಇದಕ್ಕೆ 'syllogism' ಎನ್ನುತ್ತಾರೆ. ಇದನ್ನು 'ವ್ಯವಹಿತ' ಅನುಮಾನ ಅಥವಾ '**ಮಧ್ಯಮಾನುವರ್ತಿ**' ಅನುಮಾನ ಎನ್ನಬಹುದು.

ಮೇಲೆ ಸೂಚಿಸಿರುವಂತೆ ಈ ತೆರನಾದ ನಿಗಮನ ಅನುಮಾನದಲ್ಲಿ ಎರಡು ಗೃಹೀತ ಅಥವಾ ಆಧಾರ ವಾಕ್ಯಗಳಿರುತ್ತವೆ ಮತ್ತು ಅವುಗಳಿಂದ ಉತ್ಪನ್ನವಾಗಬಹುದಾದ ನಿರ್ಣಯ ವಾಕ್ಯ ಇರುತ್ತದೆ. ವ್ಯವಹಿತ ಅನುಮಾನವೆಂದರೆ ಮೂರು ತಾರ್ಕಿಕ ವಾಕ್ಯಗಳ ಬಂಧ.

ಉದಾಹರಣೆ—

ಎಲ್ಲ ಮಾನವರೂ ಮರ್ತ್ಯರು (ಪ್ರಥಮ ಆಧಾರ ವಾಕ್ಯ)
ಸಾಕ್ರಟೀಸನು ಮಾನವ (ದ್ವಿತೀಯ ಆಧಾರ ವಾಕ್ಯ)
∴ ಸಾಕ್ರಟೀಸನು ಮರ್ತ್ಯ (ನಿರ್ಣಯ ವಾಕ್ಯ)

ಈ ಉದಾಹರಣೆಯಲ್ಲಿ ನಾವು ಗಮನಿಸಬಹುದಾದ ಹಲವು ಮುಖ್ಯ ಲಕ್ಷಣಗಳೆಂದರೆ :

1. ಎರಡು ಗೃಹೀತ ವಾಕ್ಯಗಳು ಸಂಬಂಧಪಟ್ಟಿದ್ದರೆ ಮಾತ್ರ, ಅದರಿಂದ ನಿರ್ಣಯವಾಕ್ಯವನ್ನು ಊಹಿಸಬಹುದು.

2. ನಿರ್ಣಯ ವಾಕ್ಯದ ವಿಸ್ತಾರ ಗೃಹೀತ ವಾಕ್ಯಗಳಿಗಿಂತ ಹೆಚ್ಚಿರುವುದಿಲ್ಲ. ನರೆ ವ್ಯಾಪಕತೆಯ ದೃಷ್ಟಿಯಿಂದ ಗೃಹೀತ ವಾಕ್ಯಗಳು ಎರಡೂ ಅಪೂರ್ಣವಾಗಿದ್ದರೆ, ರ್ಣಯ ವಾಕ್ಯ ಪೂರ್ಣವ್ಯಾಪಕ ಆಗಿರುವುದಿಲ್ಲ. ಮತ್ತು

3. ಗೃಹೀತ ವಾಕ್ಯಗಳ ವಾಸ್ತವಿಕ ಸತ್ಯವನ್ನು ಪ್ರಶ್ನಿಸದೆ ಒಪ್ಪಿಕೊಂಡು, ಅದ ೆ ನಿರ್ಣಯ ವಾಕ್ಯವನ್ನು ಊಹಿಸುತ್ತೇವೆ. ಎಂದರೆ ನಿಗಮನ ಅನುಮಾನದ ಲಕ್ಷಣ ್ನವ 'ರೂಪ'ಕ್ಕೆ ಮಾತ್ರ ಇಲ್ಲಿ ಗಮನಕೊಟ್ಟು ಆ ರೂಪಕ್ಕೆ ತಕ್ಕ ನಿಯಮಗಳನ್ನು ುಮಾನ ಕ್ರಿಯೆ ಪಾಲಿಸುತ್ತದೆಯೇ ಎನ್ನುವುದನ್ನು ಮಾತ್ರ ನೋಡುತ್ತೇವೆ.

## ವ್ಯವಹಿತ ಅನುಮಾನದ ರಚನೆ ಮತ್ತು ಅದರ ಭಾಗಗಳು

ವ್ಯವಹಿತ ಅನುಮಾನದಲ್ಲಿ ಮೂರು ತಾರ್ಕಿಕ ವಾಕ್ಯಗಳಿರುತ್ತವೆ. ಇವುಗಳಲ್ಲಿ ಡು ಗೃಹೀತವಾಕ್ಯಗಳು, ಒಂದು ನಿರ್ಣಯವಾಕ್ಯ.

ಪ್ರತಿಯೊಂದು ವಾಕ್ಯದಲ್ಲೂ ಎರಡು ಪದಗಳಿರುತ್ತವೆಯೆಂಬುದನ್ನು ನಾವು ಬಲ್ಲೆವು. ರೆ ಇಲ್ಲಿ ಒಂದು ಅನುಮಾನ ಕ್ರಿಯೆಯಲ್ಲಿ ಮೂರು ತಾರ್ಕಿಕ ವಾಕ್ಯಗಳಿದ್ದರೆ ಆರು ಗಳಿರುವುದಿಲ್ಲ, ಮೂರೇ ಇರುತ್ತವೆ.

ಈ ಮೂರರಲ್ಲಿ ಒಂದು ಪದ ಕೇವಲ ಗೃಹೀತ ವಾಕ್ಯಗಳಲ್ಲಿದ್ದು, ಆ ವಾಕ್ಯಗಳಿಗೆ ಸ್ಪರ ಸಂಬಂಧವನ್ನು ಕಲ್ಪಿಸುತ್ತದೆ. ಅಂತಹ ಪದಕ್ಕೆ ಪಾರಿಭಾಷಿಕವಾಗಿ '**ಮಧ್ಯಮ** ' ಎಂದು ಹೆಸರು.

ನಿರ್ಣಯವಾಕ್ಯದಲ್ಲಿರುವ ಉದ್ದೇಶ್ಯಪದ (subject) ಮತ್ತು ವಿಧೇಯ ಪದ edicate) ಗಳಿಗೆ ಕ್ರಮವಾಗಿ '**ಪಕ್ಷಪದ**' (minor term) ಮತ್ತು '**ಸಾಧ್ಯಪದ**' ajor term) ಎಂಬುದಾಗಿ ಪಾರಿಭಾಷಿಕ ಹೆಸರುಗಳಿವೆ.

ಈ ಎರಡು ಪದಗಳೂ ಎಂದರೆ 'ಸಾಧ್ಯ' ಮತ್ತು 'ಪಕ್ಷ' ಪದಗಳು ಗೃಹೀತ ಕ್ಯಗಳಲ್ಲೂ ಬರುತ್ತವೆ. ಯಾವ ಗೃಹೀತ ವಾಕ್ಯದಲ್ಲಿ 'ಸಾಧ್ಯಪದ'ವಿರುತ್ತದೋ ಆ ಕ್ಯಕ್ಕೆ '**ಸಾಧ್ಯವಾಕ್ಯ**' (Major premise) ಎಂದೂ, ಯಾವ ಗೃಹೀತ ವಾಕ್ಯದಲ್ಲಿ ಪದ'ವಿರುತ್ತದೋ ಅದಕ್ಕೆ '**ಪಕ್ಷ ವಾಕ್ಯ**' (Minor premise) ಎಂದೂ ಹೆಸರು. ಮಾನ್ಯವಾಗಿ ವ್ಯವಹಿತ ಅನುಮಾನದ ರಚನೆಯಲ್ಲಿ 'ಸಾಧ್ಯವಾಕ್ಯ' ಮೊದಲನೆಯ ರ ವಾಕ್ಯವಾಗಿ, 'ಪಕ್ಷವಾಕ್ಯ'ವು ಎರಡನೆಯದಾಗಿಯೂ ಇರುರುತ್ತದೆ.

ಈಗ ಪದಗಳು ಯಾವ ಯಾವ ವಾಕ್ಯಗಳಲ್ಲಿ ಬರುವುದೆಂಬುದನ್ನು ಗಮನಿಸಿದರೆ: 'ಮಧ್ಯಮಪದ' ಎನ್ನುವುದು 'ಸಾಧ್ಯ ವಾಕ್ಯ' ಮತ್ತು 'ಪಕ್ಷ ವಾಕ್ಯ' ಗಳೆನ್ನುವ ರ ಅಥವಾ ಗೃಹೀತ ವಾಕ್ಯಗಳಲ್ಲೇ ಇರುತ್ತದೆ. (b) 'ಸಾಧ್ಯಪದ'ವು 'ಸಾಧ್ಯ

ವಾಕ್ಯ'ದಲ್ಲೂ ಮತ್ತು 'ನಿರ್ಣಯ ವಾಕ್ಯ'ದ ವಿಧೇಯ ಪದದ ಸ್ಥಾನದಲ್ಲೂ ಇರುತ್ತದೆ. 'ಸಾಧ್ಯವಾಕ್ಯ'ದಲ್ಲಿ ಅದರ ಸ್ಥಾನ ಮಧ್ಯಮಪದದ ಸ್ಥಾನವನ್ನು ಅನುಸರಿಸಿ ಬದಲಾಗುತ್ತಾ ಇರುತ್ತದೆ. (c) 'ಪಕ್ಷ ಪದ'ವು 'ಪಕ್ಷವಾಕ್ಯ'ದಲ್ಲೂ ಮತ್ತು 'ನಿರ್ಣಯ ವಾಕ್ಯ'ದ ಉದ್ದೇಶ್ಯ ಪದದ ಸ್ಥಾನದಲ್ಲೂ ಇರುತ್ತದೆ. ಪಕ್ಷವಾಕ್ಯದಲ್ಲಿ ಅದರ ಸ್ಥಾನ 'ಮಧ್ಯಮ ಪದ'ದ ಸ್ಥಾನವನ್ನು ಅವಲಂಬಿಸಿ ಬದಲಾಗುತ್ತಾ ಇರುತ್ತದೆ.

ಈ ಮೂರು ಪದಗಳಿಗೆ ಕ್ರಮವಾಗಿ ಪಾರಿಭಾಷಿಕವಾದ ಚಿಹ್ನೆಗಳನ್ನು ಕೊಡಬಹುದು :

'ಮಧ್ಯಮ ಪದ'ಕ್ಕೆ — 'M' ಎಂದೂ

'ಪಕ್ಷಪದ'ಕ್ಕೆ — 'S' ಎಂದೂ
(ಏಕೆಂದರೆ ಇದು ನಿರ್ಣಯ ವಾಕ್ಯದಲ್ಲಿ ಸದಾ ಉದ್ದೇಶ್ಯಪದವಾಗಿಯೇ ಇರುತ್ತದೆ)

'ಸಾಧ್ಯಪದ'ಕ್ಕೆ — 'P' ಎಂದೂ
(ಏಕೆಂದರೆ ಇದು ನಿರ್ಣಯ ವಾಕ್ಯದಲ್ಲಿ ಸದಾ ವಿಧೇಯಪದವಾಗಿಯೇ ಇರುತ್ತದೆ)

ಚಿಹ್ನೆಗಳನ್ನು ಕೊಡಬಹುದು.

ಈ ಮೇಲೆ ಹೇಳಿರುವಂತೆ ವ್ಯವಹಿತ ವಾಕ್ಯದ ರಚನೆಯಲ್ಲಿ ಬರುವ ಅಂಶಗಳನ್ನು ಉದಾಹರಣೆಗಳ ಮೂಲಕ ತಿಳಿಯೋಣ.

(a) ಇಲ್ಲಿ ಮೂರು ವಾಕ್ಯಗಳಿರುತ್ತವೆ — ಗೃಹೀತ ವಾಕ್ಯಗಳೆರಡು, ನಿರ್ಣಯ ವಾಕ್ಯ ಒಂದು.

ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ — **ಸಾಧ್ಯ ವಾಕ್ಯ** (Major Premise)
ಸಾಕ್ರಟೀಸನು ಮಾನವನಾಗಿದ್ದಾನೆ — **ಪಕ್ಷ ವಾಕ್ಯ** (Minor Premise)
∴ ಸಾಕ್ರಟೀಸನು ಮರ್ತ್ಯನಾಗಿದ್ದಾನೆ — **ನಿರ್ಣಯವಾಕ್ಯ** (Conclusion)

(b) ಇಲ್ಲಿ ಮೂರು ಪದಗಳಿರುತ್ತವೆ — **ಮಧ್ಯಮ, ಸಾಧ್ಯ** ಮತ್ತು **ಪಕ್ಷ** ಪದಗಳು.

ಎಲ್ಲ ಮಾನವರೂ ಮರ್ತ್ಯರಾಗಿದ್ದಾರೆ
M P

ಸಾಕ್ರಟೀಸನು ಮಾನವನಾಗಿದ್ದಾನೆ
S M

∴ ಸಾಕ್ರಟೀಸನು ಮರ್ತ್ಯನಾಗಿದ್ದಾನೆ
S P

'M' ಮಧ್ಯಮ ಪದ, 'P' ಸಾಧ್ಯಪದ 'S' ಪಕ್ಷಪದ

ವಹಿತ ಅನುಮಾನದಲ್ಲಿ ಈ ರಚನೆಯೂ ಒಂದು ನಿಯಮವೇ. ರಚನೆಗೆ ಸಂಬಧಿಸಿದ ಾವ ನಿಯಮವನ್ನು ಉಲ್ಲಂಘಿಸಿದರೂ ತಾರ್ಕಿಕವಾಗಿ **ದೋಷ** (error ಅಥವಾ llacy) ಎನ್ನಿಸಿಕೊಳ್ಳುತ್ತದೆ. ಅಷ್ಟೇ ಅಲ್ಲದೆ ಅನುಮಾನ ಕ್ರಿಯೆಗೆ ಸಂಬಂಧಪಟ್ಟ ತರ ನಿಯಮಗಳೂ ಇವೆ. ತಾರ್ಕಿಕವಾಗಿ ಶುದ್ಧ ರೀತಿಯ ವಿಚಾರ ಹೊರಪಡಬೇಕಾದರೆ ಲ್ಲ ನಿಯಮಗಳನ್ನು ನಾವು ಅರಿತಿರಬೇಕು ಮತ್ತು ಅವುಗಳನ್ನು ಪಾಲಿಸಬೇಕು. ಈ ುಂದೆ ವ್ಯವಹಿತ ಅನುಮಾನದ ಎಲ್ಲ ನಿಯಮಗಳನ್ನೂ ಕೊಟ್ಟಿದೆ.

**ವ್ಯವಹಿತ ಅನುಮಾನದ ನಿಯಮಗಳು**

1. ಒಂದು ವ್ಯವಹಿತ ಅನುಮಾನದಲ್ಲಿ ಮೂರು, ಮತ್ತು ಕೇವಲ ಮೂರು ಪದ ಳೇ ಇರಬೇಕು. (ಈ ಮೂರು ಪದಗಳು ಸ್ಪಷ್ಟವಾಗಿದ್ದು ಎಲ್ಲ ಸಂದರ್ಭಗಳಲ್ಲೂ ಂದೇ ಅರ್ಥವನ್ನು ಪಡೆದಿರಬೇಕು)

**ಸಾಧನೆ :**

ಮೂರಕ್ಕಿಂತ ಕಡಿಮೆ ಪದಗಳಿವೆ ಎಂದಿಟ್ಟುಕೊಳ್ಳೋಣ — ಒಂದು ಅಥವಾ ಎರಡು. ಒಂದೇ ಪದವಿದ್ದರೆ ಅದು ವಾಕ್ಯವೂ ಆಗುವುದಿಲ್ಲ. ಎರಡಿದ್ದರೆ ಒಂದು ವಾಕ್ಯವಾಗಬಹುದೇ ವಿನಾ 'ಅನುಮಾನ'ವೂ ಆಗುವುದಿಲ್ಲ. ಏಕೆಂದರೆ ಅನುಮಾನದಲ್ಲಿ ಎರಡು ವಾಕ್ಯಗಳಿರಬೇಕು. ಎರಡು ವಾಕ್ಯಗಳಿದ್ದರೂ ಅದು 'ಅವ್ಯವಹಿತ' ಅನುಮಾನ (Immediate inference) ಆಗಬಹುದೇ ವಿನಾ 'ವ್ಯವಹಿತ' ಅನುಮಾನವಾಗಬಾರದು.

ಮೂರಕ್ಕಿಂತ ಹೆಚ್ಚಾಗಿ ನಾಲ್ಕು ಪದಗಳಿವೆ ಎಂದಿಟ್ಟುಕೊಳ್ಳೋಣ. ಹೀಗಾದರೆ 'ಅವ್ಯಹಿತ' ಅನುಮಾನ ಆಗುವುದಿಲ್ಲ. ಉದಾ :

ಎಲ್ಲ ಮಾನವರೂ[1] ಮರ್ತ್ಯರು[2]

ಸಾಕ್ರಟೀಸನು[3] ಗ್ರೀಕ್[4] ದೇಶದವನು.

ಇಲ್ಲಿ ನಾಲ್ಕು ಪದಗಳಿವೆಯಾದರೂ ಒಂದೊಂದು ವಾಕ್ಯಕ್ಕೂ ಸಂಬಂಧವಿರುವುದಿಲ್ಲ. ಆದ್ದರಿಂದ ಅವೆರಡರಿಂದ ಒಂದು 'ನಿರ್ಣಯ' ಬರುವುದಿಲ್ಲ.

ಅಥವಾ ನಾಲ್ಕು ಪದಗಳು, ಈ ರೀತಿಯಲ್ಲಿ ಸ್ಪಷ್ಟವಾಗಿಲ್ಲದೆ ಮೂರು ಪದಗಳ ರೂಪದಲ್ಲೇ ಇದ್ದು ದ್ವಂದ್ವಾರ್ಥವನ್ನು ಕೊಡಬಹುದು. ಉದಾ :

ಎಲ್ಲ ಛಳಿಯನ್ನೂ ಬೆಂಕಿಯಿಂದ ಹೋಗಲಾಡಿಸಬಹುದು.
ಈತನ ರೋಗ ಛಳಿ
∴ ಈತನ ರೋಗವನ್ನು ಬೆಂಕಿಯಿಂದ ಹೋಗಲಾಡಿಸಬಹುದು.

ಇಲ್ಲಿ ಮಧ್ಯಮಪದ ಒಂದೇ ಎಂದು ಕಂಡರೂ ದ್ವಂದ್ವಾರ್ಥವನ್ನು ಹೊಂದಿದೆ. ಇದನ್ನು ಗಮನಿಸದ ವ್ಯವಹಿತ ಅನುಮಾನ '**ದ್ವಂದ್ವಾರ್ಥ ಮಧ್ಯಮ**' (Ambiguous Middle) ವೆನ್ನುವ ದೋಷಕ್ಕೆ ಈಡಾಗುತ್ತದೆ.[1] ಈ ದೋಷವು ಮೇಲಿನ ರೀತಿಯಲ್ಲೇ '**ನಾಲ್ಕು ಪದಗಳ ದೋಷ**' (Fallacy of Four Terms) ದ ಒಂದು ರೀತಿ.

ಈ ಮೇಲಿನ ಕಾರಣಗಳಿಂದ ಒಂದು ವ್ಯವಹಿತ ಅನುಮಾನದಲ್ಲಿ ಮೂರು ಮತ್ತು ಕೇವಲ ಮೂರೇ ಪದಗಳು ಇರಬೇಕು.

2. ಒಂದು ವ್ಯವಹಿತ ಅನುಮಾನದಲ್ಲಿ ಮೂರು, ಮತ್ತು ಕೇವಲ ಮೂರು ವಾಕ್ಯಗಳಿರಬೇಕು.

**ಸಾಧನೆ :**

ಈ ನಿಯಮ **ರಚನೆಗೆ** ಸಂಬಂಧಪಟ್ಟದ್ದು. ಮೂರು ವಾಕ್ಯಗಳಿಗಿಂತ ಕಡಿಮೆ ಇದ್ದರೆ ವ್ಯವಹಿತ ಅನುಮಾನವಾಗುವುದಿಲ್ಲ. ಹೆಚ್ಚಿದ್ದರೆ ಎಂದರೆ ನಾಲ್ಕು ಅಥವಾ ಅದಕ್ಕಿಂತ ಹೆಚ್ಚಾಗಿದ್ದರೆ ಅದು ಒಂದು ವ್ಯವಹಿತ ಅನುಮಾನವಾಗದೆ ಬಹು ವ್ಯವಹಿತ ಅನುಮಾನಗಳಿಗೆ (multiple syllogisms) ಎಡೆಮಾಡಿ ಕೊಡುತ್ತದೆ. ಇದಕ್ಕೆ 'Poly syllogisms' ಎಂದೂ ಹೆಸರು. ಉದಾ :

ಎಲ್ಲ ಭಾರತೀಯರೂ ಸ್ವಾತಂತ್ರ್ಯಪ್ರಿಯರು
ಎಲ್ಲ ಕನ್ನಡಿಗರೂ ಭಾರತೀಯರು
ಎಲ್ಲ ಮೈಸೂರಿನವರೂ ಕನ್ನಡಿಗರು
∴ ಎಲ್ಲ ಮೈಸೂರಿನವರೂ ಸ್ವಾತಂತ್ರ್ಯಪ್ರಿಯರು

---

1 ಹೀಗೆಯೇ ದ್ವಂದ್ವಾರ್ಥ ಸಾಧ್ಯಪದ ದೋಷ ಮತ್ತು ಪಕ್ಷಪದ ದೋಷಗಳೂ ಇರಬಹುದು (Ambiguous Major or Ambiguous Minor)

ಇಲ್ಲಿ ನಾಲ್ಕು ತಾರ್ಕಿಕ ವಾಕ್ಯಗಳಿದ್ದರೂ ಎರಡು ಪೂರ್ಣ ವ್ಯವಹಿತ ಅನುಮಾನಗಳು ಅಡಗಿವೆ. ಅದನ್ನು ಬಿಡಿಸಿದರೆ ಹೀಗೆ ಕಾಣುತ್ತದೆ :

1. ಎಲ್ಲ ಭಾರತೀಯರೂ ಸ್ವಾತಂತ್ರ್ಯಪ್ರಿಯರು
ಎಲ್ಲ ಕನ್ನಡಿಗರೂ ಭಾರತೀಯರು
∴ ಎಲ್ಲ ಕನ್ನಡಿಗರೂ ಸ್ವಾತಂತ್ರ್ಯಪ್ರಿಯರು

2. ಎಲ್ಲ ಕನ್ನಡಿಗರೂ ಸ್ವಾತಂತ್ರ್ಯಪ್ರಿಯರು
ಎಲ್ಲ ಮೈಸೂರಿನವರೂ ಕನ್ನಡಿಗರು
∴ ಎಲ್ಲ ಮೈಸೂರಿನವರೂ ಸ್ವಾತಂತ್ರ್ಯಪ್ರಿಯರು.

ಹೀಗೆ ನಾಲ್ಕು ವಾಕ್ಯಗಳಿದ್ದರೆ, ಒಂದು ವ್ಯವಹಿತ ಅನುಮಾನವಾಗದೆ ಎರಡು ಆಗುತ್ತದೆ. ಆದ್ದರಿಂದ ಈ ನಿಯಮವನ್ನು ಮಾಡಲಾಗಿದೆ.

3. ಮಧ್ಯಮಪದವು ಎರಡು ಗೃಹೀತ ವಾಕ್ಯಗಳಲ್ಲಿ ಒಂದು ಸಲವಾದರೂ ವ್ಯಾಪ್ತವಾಗಿರಬೇಕು.

**ಸಾಧನೆ :**

ಒಂದು ಪದದ ವ್ಯಾಪ್ತಿ ಅಥವಾ ವ್ಯಾಪಕತೆ ಎಂದರೆ ಆ ಪದವು ತಾನು ಸೂಚಿಸುವ ವರ್ಗದ ಸಮಸ್ತ ಕ್ಷೇತ್ರವನ್ನೂ ಆವರಿಸಿಕೊಳ್ಳುವುದೆಂದರ್ಥ. ಅಥವಾ ಆ ವರ್ಗದಲ್ಲಿರುವ ಎಲ್ಲ ಅಂಶಗಳನ್ನೂ ತನ್ನ ಕ್ಷೇತ್ರದಲ್ಲಿ ಸೇರಿಸಿಕೊಳ್ಳುವುದೆಂದರ್ಥ. ಮಧ್ಯಮಪದ ಹೀಗೆ ವ್ಯಾಪ್ತವಾಗಿರದೆ ತಾನು ಸೂಚಿಸುವ ಕ್ಷೇತ್ರದಲ್ಲಿ ಹಲವು ವ್ಯಕ್ತಿಗಳಿಗೆ ಮಾತ್ರ ಸೀಮಿತವಾಗಿದ್ದರೆ, ಎರಡು ತಾರ್ಕಿಕ ವಾಕ್ಯಗಳ ನಡುವೆ ಅಗತ್ಯವಾಗಿರಬೇಕಾದ ಸಂಬಂಧ ಬೆಳೆಯುವುದಿಲ್ಲ. ಎಂದರೆ ಸಾಧ್ಯಪದ ಮತ್ತು ಪಕ್ಷಪದಗಳಿಗೆ ಸಾಮಾನ್ಯವಾದ ಕ್ಷೇತ್ರವನ್ನು ಮಧ್ಯಮಪದ ಒದಗಿಸಿದಂತಾಗುವುದಿಲ್ಲ. ಅವು ಮಧ್ಯಮ ಪದದ ಎರಡು ಬೇರೆ ಬೇರೆ ಕ್ಷೇತ್ರಗಳಿಗೆ ಅನ್ವಯವಾಗುವಂತಿದ್ದು, ಸಂಬಂಧವಿಲ್ಲದೆ ಹೋಗಬಹುದು. ಎಂದರೆ ಇಂತಹ ಸಂಬಂಧವನ್ನು ಕಲ್ಪಿಸದ ಮಧ್ಯಮಪದವು ತನ್ನ ಕರ್ತವ್ಯವನ್ನೇ ಮಾಡದಂತಾಗಿ ವ್ಯವಹಿತ ಅನುಮಾನವೇ ಇಲ್ಲದಂತಾಗುತ್ತದೆ. ಇದನ್ನು ಉದಾಹರಣೆಯ ಮೂಲಕ ತಿಳಿಯಬಹುದು.

A—ಎಲ್ಲ ವಿಜ್ಞಾನಿಗಳೂ ಕಷ್ಟಜೀವಿಗಳು
P P

A—ಎಲ್ಲ ಬೇಸಾಯಗಾರರೂ ಕಷ್ಟಜೀವಿಗಳು
S P

∴ A—ಎಲ್ಲ ಬೇಸಾಯಗಾರರೂ ವಿಜ್ಞಾನಿಗಳು
S P

ಎರಡೂ ಗೃಹೀತ ವಾಕ್ಯಗಳು 'A' ಆದುದರಿಂದ ಅವುಗಳ ವಿಧೇಯ ಪದಗಳು ಅವ್ಯಾಪ್ತವಾಗಿವೆ. ಎಂದರೆ ಮಧ್ಯಮಪದ ಅವ್ಯಾಪ್ತವಾಗಿದೆ. ಆದ್ದರಿಂದ ಸಾಧ್ಯ ಮತ್ತು ವಿಧೇಯಪದಗಳಿಗೆ ಸಂಬಂಧ ಕಲ್ಪಿಸುವುದಿಲ್ಲ. ಇದನ್ನು ವೃತ್ತಗಳ ರೂಪದಲ್ಲಿ ತೋರಿಸಬಹುದು.




ಮಧ್ಯಮ ಪದದ ಒಂದು ಭಾಗಕ್ಕೆ ಸಾಧ್ಯಪದ ಸಂಬಂಧಪಟ್ಟಿದೆ. ಮತ್ತೊಂದು ಭಾಗಕ್ಕೆ ಪಕ್ಷಪದ ಸಂಬಂಧ ಪಟ್ಟಿದೆ. ಏಕೆಂದರೆ ಮಧ್ಯಮಪದ ಎರಡೂ ವಾಕ್ಯಗಳಲ್ಲಿ 'ವ್ಯಾಪ್ತ'ವಾಗಿದೆ. ಈ ಮೂರು ಪದಗಳು ಹೇಗಿರಬೇಕೆಂದರೆ:




ಗೆರೆ ಹಾಕಿರುವ ಕ್ಷೇತ್ರದಲ್ಲಿ ಈ ಮೂರೂ ಪದಗಳು ಸೇರಿರುತ್ತವೆ. ಹೀಗಾಗ ಬೇಕಾದರೆ ಮಧ್ಯಮಪದ ಒಂದು ಗೃಹೀತ ವಾಕ್ಯದಲ್ಲಾದರೂ ವ್ಯಾಪ್ತಿಯನ್ನು ಪಡೆದಿರಬೇಕು.

ಈ ನಿಯಮವನ್ನು ಉಲ್ಲಂಘಿಸಿದರೆ ಉಂಟಾಗುವ ದೋಷಕ್ಕೆ 'ಮಧ್ಯಮ-ಪದ-ಅವ್ಯಾಪ್ತಿ' (Undisturbed Middle) ಎನ್ನುತ್ತಾರೆ. ಮೇಲಿನ ಉದಾಹರಣೆ ಈ ದೋಷಕ್ಕೆ ಈಡಾಗಿದೆ.

4. ಗೃಹೀತ ವಾಕ್ಯಗಳಲ್ಲಿ ಅವ್ಯಾಪ್ತವಾಗಿರುವ ಪದವನ್ನು ನಿರ್ಣಯ ವಾಕ್ಯದಲ್ಲಿ ವ್ಯಾಪ್ತಗೊಳಿಸಬಾರದು.

ಸಾಧನೆ :

ಈ ನಿಯಮ ನಿಗಮನ ತರ್ಕದ ಮುಖ್ಯ ಲಕ್ಷಣವನ್ನು ಪ್ರತಿಪಾದಿಸುವಂತಹುದು. ಎಂದರೆ ನಿರ್ಣಯ ವಾಕ್ಯದ ವ್ಯಾಪ್ತಿ ಗೃಹೀತ ವಾಕ್ಯಕ್ಕಿಂತ ಮೀರಬಾರದು ಎನ್ನುವುದೇ ಆ ಲಕ್ಷಣ. ಇದನ್ನು ಇನ್ನೂ ಹಲವು ನಿಯಮಗಳಲ್ಲಿ ವ್ಯಕ್ತ ಮಾಡಲಾಗಿದೆ.

ಇದರ ಪ್ರಕಾರ ಅವ್ಯಾಪ್ತವಾಗಿರುವ ಪದ, ಸಾಧ್ಯಪದವಾಗಲೀ ಅಥವಾ ಪಕ್ಷಪದವಾಗಲೀ, ಕ್ಷೇತ್ರದಲ್ಲಿ ಸೀಮಿತವಾಗಿರುತ್ತದೆ. ಇಂತಹ ಅವ್ಯಾಪ್ತವಾದ ಪದ ಗೃಹೀತ ವಾಕ್ಯದಲ್ಲಿರುವಾಗ ನಿರ್ಣಯ ವಾಕ್ಯದಲ್ಲಿ ಅದೇ ಪದ ತನ್ನ ಸಹಜವಾದ ಕ್ಷೇತ್ರ ವೈಶಾಲ್ಯವನ್ನು ಮೀರಬಾರದು ಎಂದರ್ಥ. ಇದರ ಉಲ್ಲಂಘನೆ **'ಅತಿ ವ್ಯಾಪ್ತಿ'** (illicit process) ಎಂಬ ತಾರ್ಕಿಕ ದೋಷವಾಗುತ್ತದೆ. ಈ ದೋಷ ಸಾಧ್ಯಪದಕ್ಕೆ ಸಂಬಂಧಿಸಿದರೆ ಅದನ್ನು **'ಸಾಧ್ಯಪದದ-ಅತಿವ್ಯಾಪ್ತಿ'**(Illicit Major) ಯೆನ್ನುತ್ತಾರೆ. ಹಾಗೆಯೇ ದೋಷ ಪಕ್ಷಪದಕ್ಕೆ ಅನ್ವಯವಾಗಿದ್ದರೆ **'ಪಕ್ಷಪದದ ಅತಿವ್ಯಾಪ್ತಿ'** (Illicit Minor) ಎನಿಸುತ್ತದೆ.

ಉದಾಹರಣೆ :

A—ಯಾವುದು ಚಿಂತನ ಶಕ್ತಿ ಹೊಂದಿದೆಯೋ ಅದು ಅಸ್ತಿತ್ವ ಹೊಂದಿದೆ
P

E —ಭೌತಿಕವಸ್ತು ಚಿಂತನಶಕ್ತಿ ಹೊಂದಿಲ್ಲ.
∴ E —ಭೌತಿಕವಸ್ತು ಅಸ್ತಿತ್ವ ಹೊಂದಿಲ್ಲ.
P

ಎಲ್ಲ M — P (x)
ಯಾವೊಂದು S — M ಅಲ್ಲ
∴ ಯಾವೊಂದು S — P (√) ಅಲ್ಲ

ಇದು 'ಸಾಧ್ಯಪದದ-ಅತಿವ್ಯಾಪ್ತಿ ದೋಷ'

E —ಯಾವ ಮಾನವನೂ ಪರಿಪೂರ್ಣನಲ್ಲ
A—ಎಲ್ಲ ಮಾನವರೂ ಪ್ರಾಣಿಗಳು

∴ E— ಯಾವ ಪ್ರಾಣಿಗಳೂ ಪರಿಪೂರ್ಣವಲ್ಲ

ಯಾವೊಂದು M — P ಅಲ್ಲ

ಎಲ್ಲ M — S (x)

∴ ಯಾವೊಂದು S (√) — P ಅಲ್ಲ

ಇದು 'ಪಕ್ಷಪದದ–ಅತಿವ್ಯಾಪ್ತಿ ದೋಷ'

5. ಎರಡು ನಿಷೇಧಾತ್ಮಕ ವಾಕ್ಯಗಳಿಂದ ಯಾವ ನಿರ್ಣಯ ವಾಕ್ಯವನ್ನೂ ಊಹಿಸಲಾಗದು.

**ಸಾಧನೆ :**

ನಿಷೇಧಾತ್ಮಕ ವಾಕ್ಯದಲ್ಲಿ ಉದ್ದೇಶ್ಯಪದಕ್ಕೂ ವಿಧೇಯ ಪದಕ್ಕೂ **ಸಂಬಂಧ** ವಿಲ್ಲ ಎಂದು ಅರ್ಥ. ಆದ್ದರಿಂದ ವ್ಯವಹಿತ ಅನುಮಾನದಲ್ಲಿ ಬರುವ ಎರಡು ಗೃಹೀತ ವಾಕ್ಯಗಳಲ್ಲೂ ಮಧ್ಯಮ ಪದದೊಂದಿಗೆ ಸಾಧ್ಯಪದವಾಗಲೀ, ಪಕ್ಷಪದ ವಾಗಲೀ ಸಂಬಂಧಪಟ್ಟಿಲ್ಲವೆಂದಾಗುತ್ತದೆ. ಎಂದರೆ ಮಧ್ಯಮಪದ ಸಾಧ್ಯಪದಕ್ಕೂ ಪಕ್ಷಪದಕ್ಕೂ ಯಾವ ಸಂಬಂಧವನ್ನೂ ಕಲ್ಪಿಸುವುದಿಲ್ಲ ಎಂದಾಗುತ್ತದೆ. ಇಲ್ಲಿ ಮಧ್ಯಮ ಪದದ ಸ್ಥಾನಕ್ಕೆ ಸಂಬಂಧಿಸಿದಂತೆ ಅಗತ್ಯವಾಗಿರಬೇಕಾದ ಲಕ್ಷಣ ಅದು ಕಳೆದುಕೊಂಡಿರುತ್ತದೆ. ಎಂದರೆ ಎರಡು ವಾಕ್ಯಗಳನ್ನೂ ಕೂಡಿಸದ ಮಧ್ಯಮಪದ ನಿರ್ಣಯ ವಾಕ್ಯಕ್ಕೆ ಎಡೆ ಮಾಡಿಕೊಡುವುದಿಲ್ಲ.

ಉದಾಹರಣೆ :

E — ಯಾವ ಶ್ರೀಮಂತನೂ ವಿಚಾರಪರನಲ್ಲ
E — ಯಾವ ಉಪಾಧ್ಯಾಯನೂ ಶ್ರೀಮಂತನಲ್ಲ

∴ ?

ಇಲ್ಲಿ ಪಾರಿಭಾಷಿಕವಾಗಿ ನೋಡುವುದಾದರೆ 'ಶ್ರೀಮಂತ' ಎನ್ನುವ ಮಧ್ಯಮಪದ ಮೂರನೆಯ ನಿಯಮದಂತೆ ಪೂರ್ಣವ್ಯಾಪ್ತವಾಗಿದೆ. ಆದರೆ ಸಾಧ್ಯಪದವಾಗಲೀ, ಪಕ್ಷಪದವಾಗಲೀ ಮಧ್ಯಮ ಪದದ ಕ್ಷೇತ್ರಕ್ಕಿಂತ ಹೊರಗೇ ನಿಲ್ಲುತ್ತದೆ. ಎಂದರೆ ಅವುಗಳ ಸಂಪರ್ಕ ಬೆಳೆಸುವುದೇ ಇಲ್ಲ. ವೃತ್ತಗಳಿಂದ ಹೀಗೆ ತೋರಿಸಬಹುದು :




ಆದ್ದರಿಂದ ಎರಡು ಗೃಹೀತ ವಾಕ್ಯಗಳೂ ನಿಷೇಧಾತ್ಮಕವಾಗಿದ್ದರೆ ನಿರ್ಣಯ ವಾಕ್ಯಕ್ಕೆ ಅವಕಾಶವಿರುವುದಿಲ್ಲ. ಇದಕ್ಕೆ **‘ನಿಷೇಧಾತ್ಮಕ ವಾಕ್ಯಗಳ ದೋಷ’** (Fallacy of negative premises) ಎನ್ನುತ್ತಾರೆ.

6. ಒಂದು ಗೃಹೀತವಾಕ್ಯ ನಿಷೇಧಾತ್ಮಕವಾಗಿದ್ದರೆ, ನಿರ್ಣಯ ವಾಕ್ಯವೂ ೇಧಾತ್ಮಕವಾಗಿರಲೇಬೇಕು. (ಹಾಗೆಯೇ, ನಿರ್ಣಯವಾಕ್ಯ ನಿಷೇಧಾತ್ಮಕವಾಗಿದ್ದರೆ ದು ಗೃಹೀತವಾಕ್ಯ ನಿಷೇಧಾತ್ಮಕವಾಗಿರಲೇಬೇಕು).

**ಸಾಧನೆ :**

ಹಿಂದಿನ ನಿಯಮದ ಪ್ರಕಾರ ಎರಡು ಗೃಹೀತ ವಾಕ್ಯಗಳೂ ನಿಷೇಧಾತ್ಮಕ ವಾಗಿರಲು ಸಾಧ್ಯವಿಲ್ಲ. ಎಂದರೆ ಒಂದು ವಾಕ್ಯ ನಿಷೇಧಾತ್ಮಕವಾಗಿರಬಹುದು. ಹೀಗಿದ್ದ ಪಕ್ಷದಲ್ಲಿ ಈ ನಿಯಮ ಹೇಳುವುದೇನೆಂದರೆ ನಿರ್ಣಯವಾಕ್ಯ ಭಾವಾತ್ಮಕ ವಾಗಿರಬಾರದು ಎಂದು. ಏಕೆ ? ನಿಷೇಧಾತ್ಮಕ ಗೃಹೀತ ವಾಕ್ಯದಲ್ಲಿ ಮಧ್ಯಮ ಪದಕ್ಕೂ ಇತರ ಪದಕ್ಕೂ ಸಂಬಂಧವಿಲ್ಲವೆಂದರ್ಥ. ಮತ್ತೊಂದು ವಾಕ್ಯದಲ್ಲಿ ಮಧ್ಯಮ ಪದಕ್ಕೂ ಮತ್ತೊಂದು ಪದಕ್ಕೂ ಸಂಬಂಧವಿದ್ದರೂ, ಮಧ್ಯಮಪದ ಒಂದು ಪದದೊಡನೆ ಭಾವಾತ್ಮಕ ಸಂಬಂಧ ಮತ್ತೊಂದು ಪದದೊಡನೆ ನಿಷೇಧಾತ್ಮಕ ಸಂಬಂಧ ಪಡೆದಿರುತ್ತದೆ. ಎಂದರೆ ಈ ಎರಡು ಪದಗಳು ಪರಸ್ಪರ ಮಧ್ಯಮ ಪದದ ಮೂಲಕ ಯಾವ ಭಾವಾತ್ಮಕ ಸಂಬಂಧವನ್ನೂ ಪಡೆದಿಲ್ಲ ಎಂದರ್ಥ. ಈ ಸತ್ಯವನ್ನು ನಿರ್ಣಯ ವಾಕ್ಯವೂ ತೋರಿಸಬೇಕು. ಎಂದರೆ ನಿರ್ಣಯವಾಕ್ಯವು ನಿಷೇಧಾತ್ಮಕವಾಗಿಯೇ ಇರಬೇಕು.

(ಹೀಗೆಯೇ ನಿರ್ಣಯವಾಕ್ಯ ನಿಷೇಧಾತ್ಮಕವಾಗಿದ್ದರೆ, ಪಕ್ಷ ಮತ್ತು ಸಾಧ್ಯ ಪದಗಳಲ್ಲಿ ಭಾವಾತ್ಮಕ ಸಂಬಂಧವಿಲ್ಲ ಎಂದು. ಈ ನಿಷೇಧಾತ್ಮಕ ಸಂಬಂಧವನ್ನು ಆಧಾರ ವಾಕ್ಯಗಳಲ್ಲೂ ನಾವು ಕಾಣಲೇ ಬೇಕು. ಎಂದರೆ ಅವುಗಳಲ್ಲಿ ಒಂದು ನಿಷೇಧಾತ್ಮಕವಾಗಿ ಇರಲೇ ಬೇಕು. ನಿಯಮ ಇದರಂತೆ, ಎರಡೂ ಗೃಹೀತ ವಾಕ್ಯಗಳು ನಿಷೇಧಾತ್ಮಕವಾಗಿರಲು ಸಾಧ್ಯವೇ ಇಲ್ಲ.)

7. ಎರಡು ಗೃಹೀತ ವಾಕ್ಯಗಳೂ ಭಾವಾತ್ಮಕವಾಗಿದ್ದರೆ ನಿರ್ಣಯವಾಕ್ಯ ಭಾವಾತ್ಮಕವಾಗಿಯೇ ಇರಬೇಕು. (ಹಾಗೆಯೇ ನಿರ್ಣಯ ವಾಕ್ಯ ಭಾವಾತ್ಮಕವಾಗಿದ್ದರೆ ಗೃಹೀತ ವಾಕ್ಯಗಳೆರಡೂ ಭಾವಾತ್ಮಕವಾಗಿಯೇ ಇರಬೇಕು)

**ಸಾಧನೆ :**

ಎರಡು ಗೃಹೀತ ವಾಕ್ಯಗಳೂ ಭಾವಾತ್ಮಕವಾಗಿದ್ದರೆ, ಅವುಗಳಲ್ಲಿ ಮಧ್ಯಮ ಪದವು ಸಾಧ್ಯ ಮತ್ತು ಪಕ್ಷಪದಗಳೆರಡಕ್ಕೂ ಭಾವಾತ್ಮಕ ಸಂಬಂಧ ಕಲ್ಪಿಸಿರುತ್ತದೆ. ಈ ಭಾವಾತ್ಮಕ ಸಂಬಂಧ ನಿರ್ಣಯವಾಕ್ಯದಲ್ಲೂ ಕಾಣಬೇಕು. ಎಂದರೆ ನಿರ್ಣಯವಾಕ್ಯ ಭಾವಾತ್ಮಕವಾಗಿಯೇ ಇರಬೇಕು.

(ಹೀಗೆಯೇ ನಿರ್ಣಯವಾಕ್ಯ ಭಾವಾತ್ಮಕವಾಗಿದ್ದರೆ, ಪಕ್ಷ ಪದ ಮತ್ತು ಸಾಧ್ಯಪದಗಳು ಪರಸ್ಪರ ಭಾವಾತ್ಮಕ ಸಂಬಂಧಪಟ್ಟಿರುತ್ತವೆ. ಈ ಸಂಬಂಧ ಆಧಾರ ವಾಕ್ಯಗಳಲ್ಲೂ ಪ್ರಕಟವಾಗಿರಬೇಕು. ಅಲ್ಲಿ ನಿಷೇಧಕ್ಕೆ ಆಸ್ಪದವೇ ಇರುವುದಿಲ್ಲ. ಎಂದರೆ ಎರಡು ಗೃಹೀತ ವಾಕ್ಯಗಳೂ ಭಾವಾತ್ಮಕವಾಗಿರಲೇಬೇಕು.)

8. ಎರಡು ಗೃಹೀತ ವಾಕ್ಯಗಳೂ ಅಪೂರ್ಣವ್ಯಾಪಕವಾಗಿದ್ದರೆ, ಯಾವ ನಿರ್ಣಯ ವಾಕ್ಯಕ್ಕೂ ಅವಕಾಶವಿರುವುದಿಲ್ಲ.

**ಸಾಧನೆ :**

ಗೃಹೀತ ವಾಕ್ಯಗಳೆರಡೂ ಅಪೂರ್ಣವ್ಯಾಪಕವಾಗಿರಬಹುದಾದರೆ I ಮತ್ತು O ಗಳ ವಿವಿಧ ಸಂಯೋಜನೆಗಳಾಗಿರಬೇಕು. ಎಂದರೆ I—I, I—O, O—I ಮತ್ತು O – O ಗಳ ರೂಪವಾಗಿರಬೇಕು.

(a) ಇವುಗಳಲ್ಲಿ **ನಿಯಮ ಐದರಂತೆ** O — O ವಾಕ್ಯಗಳು ನಿಷೇಧಾತ್ಮಕವಾಗಿರುತ್ತವೆ. ಆದ್ದರಿಂದ ಯಾವ ನಿರ್ಣಯ ವಾಕ್ಯಕ್ಕೂ ಅವಕಾಶವಿರುವುದಿಲ್ಲ.

(b) I — O ಮತ್ತು O – I ಗಳಲ್ಲಿ **ನಿಯಮ ಆರರಂತೆ,** ನಿಷೇಧಾತ್ಮಕ ನಿರ್ಣಯ ವಾಕ್ಯಕ್ಕೆ ಮಾತ್ರ ಅವಕಾಶ ಉಂಟು. ಅದು ಸಾಧ್ಯವೇ ಎಂದು ನೋಡಬೇಕು. I – O ಅಥವಾ O – I ಗಳಲ್ಲಿ ಕೇವಲ ಒಂದು ಪದ ಮಾತ್ರ ಪೂರ್ಣ ವ್ಯಾಪ್ತಿಯನ್ನು ಹೊಂದಿರಬಹುದು. ಏಕೆಂದರೆ I ನಲ್ಲಿ ಯಾವ ಪದವೂ ವ್ಯಾಪ್ತವಾಗಿರುವುದಿಲ್ಲ. O ನಲ್ಲಿ ವಿಧೇಯ ಪದ ಮಾತ್ರ ವ್ಯಾಪ್ತವಾಗಿರುತ್ತದೆ. **ನಿಯಮ ಮೂರರಂತೆ,** ಮಧ್ಯಮ ಪದ ವ್ಯಾಪ್ತಿಯನ್ನು ಹೊಂದಿರಲೇ ಬೇಕು.

ಎಂದರೆ I — O ಗಳಲ್ಲಿ O ವಾಕ್ಯದ ವಿಧೇಯ ಪದವಾಗಿ ಮಧ್ಯಮ ಪದವಿದ್ದರೆ ಮಾತ್ರ ಅದು ಸಾಧ್ಯ. ಮಿಕ್ಕ ಯಾವ ಪದಗಳೂ, ಎಂದರೆ ಸಾಧ್ಯ ಮತ್ತು ಪಕ್ಷ ಪದಗಳು ಅವ್ಯಾಪ್ತವಾಗಿರುತ್ತವೆ.

ಒಂದು ಗೃಹೀತವಾಕ್ಯ ನಿಷೇಧಾತ್ಮಕವಾಗಿರುವುದರಿಂದ ನಿರ್ಣಯ ವಾಕ್ಯವೂ ನಿಷೇಧಾತ್ಮಕವಾಗಿರುತ್ತದೆ. ಈ ವಾಕ್ಯದಲ್ಲಿ ವಿಧೇಯಪದ ವ್ಯಾಪ್ತವಾಗಿರುತ್ತದೆ. ಇದು ಸಾಧ್ಯಪದ. ಆದರೆ ಈ ಸಾಧ್ಯಪದ ಗೃಹೀತವಾಕ್ಯದಲ್ಲಿ ವ್ಯಾಪ್ತವಾಗಿಲ್ಲ. ಆದ್ದರಿಂದ ನಿರ್ಣಯವಾಕ್ಯವನ್ನು ನಾವು ಮಾಡುವುದಾದರೆ 'ಸಾಧ್ಯಪದದ-ಅತಿ ವ್ಯಾಪ್ತಿ ದೋಷ'ಕ್ಕೆ ಗುರಿಯಾಗುತ್ತೇವೆ. ಎಂದರೆ I — O ಅಥವಾ O — I ಗಳಿಂದ ನಿರ್ಣಯ ವಾಕ್ಯ ಸಾಧ್ಯವಿಲ್ಲ.

(c) ಈಗ ತೋರಿಸಬೇಕಾಗಿರುವುದು I — I ಗಳ ಸಂಯೋಜನೆ. ಇವೆರಡೂ ಗೃಹೀತ ಪದಗಳಾಗಿದ್ದರೆ, ಎರಡರಲ್ಲೂ ಮಧ್ಯಮಪದ (ಅದು ಉದ್ದೇಶ್ಯ ಪದ ವಾಗಿರಲೀ, ವಿಧೇಯ ಪದವಾಗಿರಲೀ) ಅವ್ಯಾಪ್ತವಾಗಿಯೇ ಇರುತ್ತದೆ. ಏಕೆಂದರೆ I ವಾಕ್ಯ ಯಾವ ಪದವನ್ನೂ ವ್ಯಾಪ್ತಗೊಳಿಸುವುದಿಲ್ಲ. ಮಧ್ಯಮ ಪದ ವ್ಯಾಪ್ತಿ ಯನ್ನು ಹೊಂದಿಲ್ಲದಿದ್ದರೆ ನಿರ್ಣಯ ವಾಕ್ಯಕ್ಕೆ ಅವಕಾಶವೇ ಇಲ್ಲ.

ಹೀಗೆ ಗೃಹೀತ ವಾಕ್ಯಗಳು ಅಪೂರ್ಣವ್ಯಾಪಕ ವಾಕ್ಯಗಳಾದಲ್ಲಿ ನಿರ್ಣಯ ವಾಕ್ಯ ಸಾಧ್ಯವಾಗುವುದಿಲ್ಲ.

9. ಒಂದು ಗೃಹೀತ ವಾಕ್ಯ ಅಪೂರ್ಣವ್ಯಾಪಕವಾಗಿದ್ದರೆ ನಿರ್ಣಯ ವಾಕ್ಯವೂ ...ರ್ಣವಾಗಿರಬೇಕು.

...ಾಧನೆ :

ಈ ನಿಯಮವೂ ಕೂಡ ನಿಗಮನ ಅನುಮಾನದ ಸ್ವರೂಪವನ್ನು ತಿಳಿಸುತ್ತದೆ. ನಿರ್ಣಯ ವಾಕ್ಯವು ಗೃಹೀತ ವಾಕ್ಯಕ್ಕಿಂತಲೂ ವ್ಯಾಪಕವಾಗಿರಬಾರದೆಂದೇ ಈ ನಿಯಮ. ಈ ನಿಯಮವನ್ನು ಉಲ್ಲಂಘಿಸಿದರೆ ವ್ಯವಹಿತ ಅನುಮಾನವು ಮಧ್ಯಮ ಪದದ ಅವ್ಯಾಪ್ತಿ, ಸಾಧ್ಯಪದದ ಅತಿವ್ಯಾಪ್ತಿ, ಪಕ್ಷಪದದ ಅತಿವ್ಯಾಪ್ತಿ ಅಥವಾ ಎರಡು ನಿಷೇಧಾತ್ಮಕಗಳ ದೋಷಗಳಿಗೆ ಎಡೆಮಾಡಿಕೊಡುತ್ತದೆ.

ಒಂದು ಗೃಹೀತ ವಾಕ್ಯ ಅಪೂರ್ಣವ್ಯಾಪಕವಾಗಿದ್ದರೆ, ಮತ್ತೊಂದು ವಾಕ್ಯವೂ ಎಂಟನೆಯ ನಿಯಮದಂತೆ ಅಪೂರ್ಣವ್ಯಾಪಕವಾಗಿರಬಾರದು. ಎಂದರೆ ಅದು ಪೂರ್ಣವ್ಯಾಪಕ ಆಗಿರಬೇಕು. ಒಂದು ಅಪೂರ್ಣವ್ಯಾಪಕ, ಮತ್ತೊಂದು ಪೂರ್ಣ ವ್ಯಾಪಕ ವಾಕ್ಯವೂ ಆಗುವ ಸಂಯೋಜನೆಗಳು ಹೀಗಿರುತ್ತವೆ.

A — I, I — A, E — I, I — E, A — D, D — A E — O, O — E.

ಇವುಗಳಲ್ಲಿ E — O ಮತ್ತು O — E ಗಳು **ಐದನೆಯ ನಿಯಮ**ದಂತೆ ಯಾವ ನಿರ್ಣಯ ವಾಕ್ಯವನ್ನೂ ನೀಡುವುದಿಲ್ಲ.

A — I ಅಥವಾ I — A ವಾಕ್ಯಗಳು ಗೃಹೀತವಾದರೆ ಅವುಗಳಲ್ಲಿ ಕೇವಲ ಒಂದೇ ಪದ ವ್ಯಾಪ್ತಿಯನ್ನು ಹೊಂದಿರುತ್ತದೆ. ಅದು ಮಧ್ಯಮ ಪದ ಆಗಿರಬೇಕು. (**ನಿಯಮ ಮೂರು**). ಉಳಿದ ಸಾಧ್ಯ ಮತ್ತು ಪಕ್ಷ ಪದಗಳು ಅವ್ಯಾಪ್ತವಾಗಿರುತ್ತವೆ. ಆದ್ದರಿಂದ ಅವು ಕೂಡ ನಿರ್ಣಯವಾಕ್ಯದಲ್ಲಿ ಅವ್ಯಾಪ್ತವಾಗಿಯೇ ಉಳಿಯಬೇಕು (**ನಿಯಮ ನಾಲ್ಕು**). ನಿರ್ಣಯ ವಾಕ್ಯವು ಪೂರ್ಣವ್ಯಾಪಕ ವಾಕ್ಯವಾದರೆ ಎಂದರೆ A ಆದರೆ, ಒಂದು ಪದ ವ್ಯಾಪ್ತ ಆಗುತ್ತದೆ. ಎಂದರೆ 'ಪಕ್ಷಪದ-ಅತಿವ್ಯಾಪ್ತಿ.' ಇದನ್ನು ನಿವಾರಿಸಲು ನಿರ್ಣಯ ವಾಕ್ಯವು ಅಪೂರ್ಣ ವ್ಯಾಪಕವೇ ಆಗಬೇಕು — A ಆಗಬಾರದು I ಆಗಬೇಕು.

ಇದೇ ವಾದವನ್ನು E — I ಗಳಿಗೆ ಅನ್ವಯಿಸಬಹುದು. ಇಲ್ಲಿ ನಿರ್ಣಯ ವಾಕ್ಯವು ಪೂರ್ಣವ್ಯಾಪಕವಾದರೆ 'ಪಕ್ಷಪದದ-ಅತಿವ್ಯಾಪ್ತಿ' ಆಗುತ್ತದೆ. ಗೃಹೀತ ವಾಕ್ಯಗಳು I — E ಆದರೆ ಸಾಧ್ಯಪದ-ಅತಿವ್ಯಾಪ್ತಿ ಆಗುತ್ತದೆ. ಇಲ್ಲಿನ ದೋಷಗಳನ್ನು ನಿವಾರಿಸಲು ನಿರ್ಣಯವಾಕ್ಯ ಅಪೂರ್ಣವ್ಯಾಪಕ ಆಗಬೇಕು. ಉಳಿದದ್ದು A — O ಮತ್ತು O — A ಸಂಯೋಜನೆಗಳು. ಇವುಗಳಲ್ಲಿ A — O ಗೃಹೀತ ವಾಕ್ಯಗಳಾಗಿ ಪೂರ್ಣವ್ಯಾಪಕ ವಾಕ್ಯ ನಿರ್ಣಯವಾದರೆ ಸಾಧ್ಯಪದ-ಅತಿವ್ಯಾಪ್ತಿ ಮತ್ತು ಪಕ್ಷಪದ-ಅತಿವ್ಯಾಪ್ತಿ ದೋಷಗಳಾಗುತ್ತವೆ.

O — A ಗೃಹೀತ ವಾಕ್ಯಗಳಾಗಿ, ನಿರ್ಣಯ ವಾಕ್ಯ ಪೂರ್ಣವ್ಯಾಪಕವಾದರೆ ಪಕ್ಷಪದ-ಅತಿವ್ಯಾಪ್ತಿಯಾಗುತ್ತದೆ.

ಆದ್ದರಿಂದ ಈ ಎಲ್ಲ ರೀತಿಯಿಂದಲೂ ನಿರ್ಣಯವಾಕ್ಯ ಅಪೂರ್ಣವ್ಯಾಪಕವಾಗಿಯೇ ಇರಬೇಕು.

10. ಸಾಧ್ಯವಾಕ್ಯವು ಅಪೂರ್ಣವ್ಯಾಪಕ ಆಗಿದ್ದು, ಪಕ್ಷವಾಕ್ಯವು ನಿಷೇಧಾತ್ಮಕವಾಗಿದ್ದರೆ, ಯಾವ ನಿರ್ಣಯ ವಾಕ್ಯವನ್ನೂ ಊಹಿಸಲು ಸಾಧ್ಯವಿಲ್ಲ.

**ಸಾಧನೆ :**

ಈ ನಿಯಮದ ಪ್ರಕಾರ ಗೃಹೀತ ವಾಕ್ಯಗಳನ್ನು ಸಂಯೋಜಿಸಿದರೆ ಕೆಳಗಿನ ರೀತಿ ಇರುತ್ತವೆ:

I — O, I — E, O — O, O — E.

ಇವುಗಳಲ್ಲಿ ಯಾವ ಸಂಯೋಜನೆಯಿಂದಲೂ ನಿರ್ಣಯ ವಾಕ್ಯವು ಬರದಿದ್ದರೆ ನಿಯಮವನ್ನು ಸಾಧಿಸಿದಂತಾಗುತ್ತದೆ.

ಇವುಗಳಲ್ಲಿ I — O ಯಾವ ನಿರ್ಣಯವಾಕ್ಯವೂ ಬರುವುದಿಲ್ಲ (**ನಿಯಮ ಎಂಟು**). O — O ಮತ್ತು O — E ಗಳೂ ಯಾವ ನಿರ್ಣಯ ವಾಕ್ಯಕೂ ಆಸ್ಪದ ನೀಡುವುದಿಲ್ಲ. (**ನಿಯಮ ಐದು**) ಉಳಿದದ್ದು I — E ಸಂಯೋಜನೆ. ಇವುಗಳನ್ನು ಗೃಹೀತ ವಾಕ್ಯಗಳಾಗಿ ತೆಗೆದುಕೊಂಡರೆ ನಿರ್ಣಯವಾಕ್ಯವು ಅಪೂರ್ಣ ವಾಕ್ಯವಾಗಿಯೂ ನಿಷೇಧಾತ್ಮಕವಾಗಿಯೂ ಇರಬೇಕಾಗುತ್ತದೆ. (**ನಿಯಮಗಳು ಒಂಭತ್ತು ಮತ್ತು ಆರು**). ಎಂದರೆ O ಆಗಿರಬೇಕು. ಅವುಗಳಿಂದ ಬಂದ ನಿರ್ಣಯ ವಾಕ್ಯ ವ್ಯವಹಿತ ಅನುಮಾನದ ಇತರ ಎಲ್ಲ ನಿಯಮಗಳನ್ನು ಪಾಲಿಸುತ್ತದೆಯೇ ಎಂದು ನೋಡೋಣ.

I — ಹಲವು ವಿದ್ಯಾರ್ಥಿಗಳು ದಡ್ಡರು ........P i M ×
E — ಯಾವ ದಡ್ಡನೂ ಉಪಯುಕ್ತನಲ್ಲ ........M e S

∴ O— ಹಲವು ಉಪಯುಕ್ತರಲ್ಲದವರು ವಿದ್ಯಾರ್ಥಿಗಳು ........ S o P ✓

ಇಲ್ಲಿ ಸಾಧ್ಯಪದದ-ಅತಿವ್ಯಾಪ್ತಿ ದೋಷವಿದೆ. ಆದ್ದರಿಂದ ಈ ನಿಯಮ ಗೃಹೀತ ವಾಕ್ಯಗಳಲ್ಲಿ ಸಾಧ್ಯವಾಕ್ಯ ಅಪೂರ್ಣವ್ಯಾಪಕವಾಗಿಯೂ ಇದ್ದರೆ ನಿರ್ಣಯ ವಾಕ್ಯವನ್ನು ಊಹಿಸಲು ಸಾಧ್ಯವಿಲ್ಲ ಎನ್ನುತ್ತದೆ.

ಹೀಗೆ ಈ ನಿಯಮಗಳು ವ್ಯವಹಿತ ಅನುಮಾನದ ತಾರ್ಕಿಕ ರೂಪ ಮತ್ತು ...ತಹ ರೂಪಕ್ಕೆ ಸಾಪೇಕ್ಷವಾದ ಸತ್ಯವನ್ನು ಕಾಪಾಡುತ್ತದೆ. ಈ ಮೊದಲೇ ತಿಳಿಸಿರು...ತೆ ವ್ಯವಹಿತ ಅನುಮಾನದ ಮೂರು ವಾಕ್ಯಗಳಲ್ಲಿ ವಾಸ್ತವಿಕ ಸತ್ಯ ಅಡಗಿದೆಯೇ ...ನ್ನುವುದಕ್ಕಿಂತ, ಒಂದು ಆಲೋಚನೆ ತರ್ಕದ ನಿಯಮಗಳನ್ನು ಪಾಲಿಸಿದರೆ ಹೇಗೆ ...ಗಮನ ಸತ್ಯವನ್ನು ಸಾಧಿಸುತ್ತದೆ ಎನ್ನುವುದನ್ನು ಕಾಣಬಹುದು.

## ವ್ಯವಹಿತ ಅನುಮಾನದ 'ಪ್ರತಿಮಾ' ರೂಪಗಳು
(Figures of Categorical Syllogism)

ಒಂದು ವ್ಯವಹಿತ ಅನುಮಾನದಲ್ಲಿ ಮೂರು ವಾಕ್ಯಗಳೂ ಮೂರು ಪದಗಳೂ ...ಯುತ್ತದೆಂದು ನಾವು ಅರಿತಿದ್ದೇವೆ. ಒಂದು ಉದಾಹರಣೆಯನ್ನು ತೆಗೆದುಕೊಂಡಲ್ಲಿ ...ಧ್ಯಮ ಪದವು ಗೃಹೀತ ವಾಕ್ಯಗಳಲ್ಲಿ ತನ್ನ ಸ್ಥಾನವನ್ನು ಬದಲಿಸುತ್ತಿರಬಹುದೆಂದು

ನಾವು ಈಗಾಗಲೇ ಗಮನಿಸಿರಬಹುದು. ಮಧ್ಯಮ ಪದದ ಸ್ಥಾನವನ್ನು ಅನುಸರಿಸಿ ಇತರ ಪದಗಳು ಸ್ಥಾನವನ್ನು ಗಳಿಸಿರುತ್ತವೆ. ಹೀಗೆ ಮಧ್ಯಮಪದ ಆಕ್ರಮಿಸಿಕೊಳ್ಳುವ ಸ್ಥಾನದಿಂದ ರೂಪುಗೊಳ್ಳುವ ವ್ಯವಹಿತ ಅನುಮಾನದ ರಚನೆಯನ್ನು ಒಂದು 'ಪ್ರತಿಮಾ' (Figure) ಎನ್ನಬಹುದು. ಇಂತಹ 'ಪ್ರತಿಮೆ' ಗಳು ನಾಲ್ಕು. ಅವು ಹೀಗಿರುತ್ತವೆ.

**1. ಮೊದಲ ಪ್ರತಿಮೆ :**

ಮಧ್ಯಮ ಪದವು ಸಾಧ್ಯವಾಕ್ಯದಲ್ಲಿ ಉದ್ದೇಶ್ಯಪದ .... M — P
,, ಪಕ್ಷ ವಾಕ್ಯದಲ್ಲಿ ವಿಧೇಯಪದ .... S — M

**2. ಎರಡನೆಯ ಪ್ರತಿಮೆ :**

ಮಧ್ಯಮ ಪದವು ಸಾಧ್ಯವಾಕ್ಯದಲ್ಲಿ ವಿಧೇಯ ಪದ ........ P — M
,, ಪಕ್ಷ ವಾಕ್ಯದಲ್ಲಿ ವಿಧೇಯ ಪದ ........ S — M

**3. ಮೂರನೆಯ ಪ್ರತಿಮೆ :**

ಮಧ್ಯಮ ಪದವು ಸಾಧ್ಯವಾಕ್ಯದಲ್ಲಿ ಉದ್ದೇಶ್ಯಪದ ........ M — P
,, ಪಕ್ಷ ವಾಕ್ಯದಲ್ಲಿ ಉದ್ದೇಶ್ಯಪದ ........ M – S

**4. ನಾಲ್ಕನೆಯ ಪ್ರತಿಮೆ :**

ಮಧ್ಯಮ ಪದವು ಸಾಧ್ಯವಾಕ್ಯದಲ್ಲಿ ವಿಧೇಯಪದ ........ P — M
,, ಪಕ್ಷ ವಾಕ್ಯದಲ್ಲಿ ಉದ್ದೇಶ್ಯ ಪದ ........ M – S

ಎಲ್ಲ ರಚನೆಗಳಲ್ಲೂ ನಿರ್ಣಯ ವಾಕ್ಯದಲ್ಲಿ ಬರುವ ಪಕ್ಷ ಮತ್ತು ಸಾಧ್ಯಪದಗಳ ಸ್ಥಾನ ನಿಯಮಿತವಾದದ್ದು. ಎಂದರೆ ಪಕ್ಷಪದ ಸದಾ ಉದ್ದೇಶ್ಯಪದವಾಗಿಯೂ ಸಾಧ್ಯ ಪದವು ಸದಾ ವಿಧೇಯ ಪದವಾಗಿಯೂ ಇರುತ್ತವೆ. ಇವುಗಳನ್ನು ಬಳಸಿಕೊಂಡುನಾಲ್ಕು 'ಪ್ರತಿಮಾ' ರೂಪ ಗಳನ್ನು ಹೀಗೆ ನಿರೂಪಿಸಬಹುದು.

| ಪ್ರತಿಮೆ I | ಪ್ರತಿಮೆ II | ಪ್ರತಿಮೆ III | ಪ್ರತಿಮೆ IV |
|---|---|---|---|
| M — P | P — M | M — P | P — M |
| S — M | S — M | M — S | M — S |
| S — P | S — P | S — P | S — P |

ನಾಹರಣೆಗಳು :

**1. ಮೊದಲನೆಯ ಪ್ರತಿಮೆ :**

ಎಲ್ಲ ಕಾಲೇಜಿನ ವಿದ್ಯಾರ್ಥಿಗಳೂ (M) ಹೈಸ್ಕೂಲಿನಿಂದ ಬಂದವರು (P) — M a P

ಎಲ್ಲ ಪ್ರಿ–ಯೂನಿವರ್ಸಿಟಿಯವರೂ (S) ಕಾಲೇಜಿನ ವಿದ್ಯಾರ್ಥಿಗಳು (M) — S a M

∴ ಎಲ್ಲ ಪ್ರಿ–ಯೂನಿವರ್ಸಿಟಿಯವರೂ (S) ಹೈಸ್ಕೂಲಿನಿಂದ ಬಂದವರು (P) — S a P

**2. ಎರಡನೆಯ ಪ್ರತಿಮೆ :**

ಎಲ್ಲ ಕಾಲೇಜಿನ ವಿದ್ಯಾರ್ಥಿಗಳೂ (P) ಹೈಸ್ಕೂಲಿನಿಂದ ಬಂದವರು (M) — P a M

ಯಾವ ಸೈನಿಕ ಸಂಘದ ಸದಸ್ಯನೂ (S) ಹೈಸ್ಕೂಲಿನಿಂದ ಬಂದಿಲ್ಲ (M) — S e M

∴ ಯಾವ ಸೈನಿಕ ಸಂಘದ ಸದಸ್ಯನೂ (S) ಕಾಲೇಜಿನ ವಿದ್ಯಾರ್ಥಿಯಲ್ಲ (P) — S e P

**3. ಮೂರನೆಯ ಪ್ರತಿಮೆ :**

ಎಲ್ಲ ಗ್ರೀಕ್ ದೇಶದವರೂ (M) ಸಮುದ್ರವನ್ನು ನೋಡಿರುತ್ತಾರೆ (P) — M a P

ಎಲ್ಲ ಗ್ರೀಕ್ ದೇಶದವರೂ (M) ಯೋಧರು (P) — M a S

∴ ಹಲವು ಯೋಧರು ಸಮುದ್ರವನ್ನು ನೋಡಿರುತ್ತಾರೆ — S i P

**4. ನಾಲ್ಕನೆಯ ಪ್ರತಿಮೆ :**

ಎಲ್ಲ ನಕ್ಷತ್ರಗಳೂ (P) ಸ್ವಯಂಪ್ರಕಾಶವುಳ್ಳವು (M) — P a M

ಎಲ್ಲ ಸ್ವಯಂಪ್ರಕಾಶವುಳ್ಳವರೂ (M) ಜ್ಞಾನಿಗಳು (S) — M a S

∴ ಹಲವು ಜ್ಞಾನಿಗಳು ನಕ್ಷತ್ರಗಳು — S i P

**ಮೊದಲ 'ಪ್ರತಿಮಾ' ರೂಪದ ವೈಶಿಷ್ಟ್ಯ :**

ಅರಿಸ್ಟಾಟಲನ ಪ್ರಕಾರ ನಾಲ್ಕು ಪ್ರತಿಮಾ ರೂಪಗಳಲ್ಲಿ ಮೊದಲ ಪ್ರತಿಮಾ ರೂಪವೇ ಶ್ರೇಷ್ಠವಾದುದು. (ನಾಲ್ಕನೆಯ ಪ್ರತಿಮಾ ರೂಪವನ್ನಂತೂ ಆತನು ಅಂಗೀಕರಿಸಲೇ ಇಲ್ಲ.) ಆತನ ಪ್ರಕಾರ ಎಲ್ಲ ಪ್ರತಿಮಾ ರೂಪಗಳನ್ನೂ ಮೊದಲ ಪ್ರತಿಮೆಯಲ್ಲೇ ವ್ಯಕ್ತಮಾಡಬಹುದು. ಇದು ಸರ್ವ ಸಾಮಾನ್ಯವಾಗಿ ಬಳಕೆಯಲ್ಲಿರುವ ಪ್ರತಿಮಾ ರೂಪ, ಅಲ್ಲದೆ ಬಹು ಸರಳವಾದದ್ದೂ ಹೌದು. ಈ ಪ್ರತಿಮಾರೂಪದ ನಿರ್ಣಯವಾಕ್ಯವಾಗಿ ನಿರಪೇಕ್ಷ ವಾಕ್ಯ (categorical proposition) ದ ಯಾವ ರೂಪವನ್ನಾದರೂ, ಎಂದರೆ A, E, I ಮತ್ತು O ವಾಕ್ಯಗಳನ್ನು ಪಡೆಯಬಹುದು. ಈ ಸೌಲಭ್ಯ ಇತರ ಪ್ರತಿಮಾ ರೂಪಗಳಲ್ಲಿ ಇರುವುದಿಲ್ಲ.

ಈ ಎಲ್ಲ ಕಾರಣಗಳಿಂದ ಅರಿಸ್ಟಾಟಲನು ಮೊದಲ ಪ್ರತಿಮಾ ರೂಪಕ್ಕೆ ಮನ್ನಣೆ ಕೊಡುತ್ತಾನೆ. ಅಲ್ಲದೆ ತಾನು ರಚಿಸಿದ ನಿಗಮನ ಅನುಮಾನದ ಉತ್ತಮ ನಿದರ್ಶನವಾದ ವ್ಯವಹಿತ ಅನುಮಾನದ ಸರ್ವ ಲಕ್ಷಣಗಳನ್ನೂ ಪ್ರತಿಪಾದಿಸುವಂತಹ **ಸೂತ್ರದ** ನಿಯಮವನ್ನು ಮೊದಲ ಪ್ರತಿಮೆ ಮಾತ್ರ ಅನುಸರಿಸುತ್ತದೆ ಎಂದು ಅರಿಸ್ಟಾಟಲನು ಅದರ ವಿಚಾರವಾಗಿ ತನ್ನ ಮೆಚ್ಚುಗೆಯನ್ನಿತ್ತು ಅದನ್ನು 'ಪರಿಪೂರ್ಣ ಪ್ರತಿಮಾ ರೂಪ' (Perfect Figure) ಎನ್ನುತ್ತಾನೆ. ಇತರ ಪ್ರತಿಮೆಗಳನ್ನು 'ಅಪರಿಪೂರ್ಣ ಪ್ರತಿಮೆ' (Imperfect Figures) ಗಳು ಎನ್ನುತ್ತಾನೆ.

ಅರಿಸ್ಟಾಟಲನು ನೀಡಿದ ಸೂತ್ರವನ್ನು 'Dictum de omni et nullo' ಎನ್ನುತ್ತಾರೆ. ಪದಶಃ ಇದರ ಅರ್ಥವೇನೆಂದರೆ:

'ಎಲ್ಲದರ ವಿಚಾರವಾಗಿಯೂ ಭಾವಾತ್ಮಕವಾಗಿ ಹೇಳಬಹುದಾದ ಅಥವಾ ಯಾವುದರ ವಿಚಾರವಾಗಿಯೂ ಅಭಾವಾತ್ಮಕವಾಗಿ ಹೇಳಲಾಗದ ಮಾತು' ಎನ್ನುವ ಸೂತ್ರ. ಎಂದರೆ ಯಾವುದಾದರೂ ಒಂದು ವರ್ಗವನ್ನು ಸಮಗ್ರವಾಗಿ ತೆಗೆದುಕೊಂಡು ಭಾವಾತ್ಮಕವಾಗಲೀ, ನಿಷೇಧಾತ್ಮಕವಾಗಲೀ ಹೇಳಿದಲ್ಲಿ, ಅದು ಆ ವರ್ಗದಲ್ಲಿನ ಅಂಶ ಅಥವಾ ಅಂಗಗಳಿಗೂ ಭಾವಾತ್ಮಕವಾಗಿ ಅಥವಾ ನಿಷೇಧಾತ್ಮಕವಾಗಿ ಅನ್ವಯವಾಗುತ್ತದೆ. ಉದಾಹರಣೆ :

'ಎಲ್ಲ ಮಾನವರೂ ಮರ್ತ್ಯರು.'

ಇಲ್ಲಿ ಮಾನವರ ವರ್ಗಕ್ಕೆ ಸಮಗ್ರವಾಗಿ 'ಭಾವಾತ್ಮಕ'ವಾಗಿ ಒಂದು ಗುಣವನ್ನು ಹೇಳಿದೆ. ಎಂದರೆ ಪ್ರತಿಯೊಬ್ಬ ಮಾನವನಿಗೂ ಈ ಗುಣ ಅನ್ವಯವಾಗುತ್ತದೆ.

ಹೀಗೆಯೇ,

'ಯಾವ ಮಾನವನೂ ಅಮರನಲ್ಲ'

ಇಲ್ಲ ಮಾನವನ ವರ್ಗಕ್ಕೆ ಅಮರತ್ವದ ನಿಷೇಧ ಹೇಳಿದೆ. ಎಂದರೆ ಪ್ರತಿಯೊಬ್ಬ ಾನವನಿಗೂ ಈ ನಿಷೇಧ ಅನ್ವಯವಾಗುತ್ತದೆ.

ಅರಿಸ್ಟಾಟಲನ ಈ ಸೂತ್ರ ನಿಗಮನ ತರ್ಕದ ಸ್ವರೂಪವನ್ನು ಹೇಳುತ್ತದೆ. ಮತ್ತು ದನ್ನು ಪೂರ್ಣವಾಗಿ ವ್ಯವಹಿತ ಅನುಮಾನದ ಮೊದಲ ಪ್ರತಿಮಾ ರೂಪ ವ್ಯಕ್ತ ಡಿಸುತ್ತದೆ.

### . ವ್ಯವಹಿತ ಅನುಮಾನ ಮಿಶ್ರದ ರೂಪಗಳು (Mixed Syllogisms)

ಇದುವರೆವಿಗೂ ನಾವು ಅಧ್ಯಯನ ಮಾಡಿರುವ ವ್ಯವಹಿತ ಅನುಮಾನದಲ್ಲಿ ಬರುವ ೂರು ವಾಕ್ಯಗಳೂ ನಿರಪೇಕ್ಷ ವಾಕ್ಯಗಳಿಂದಲೇ ರಚಿತವಾದವು. ಆದರೆ ತಾರ್ಕಿಕ ಾಕ್ಯಗಳಲ್ಲಿ ಸಾಪೇಕ್ಷ ರೂಪವನ್ನು ಹೊಂದಿರುವ ನಿದರ್ಶನಗಳಿರುತ್ತವೆ. ಅವು ನಿಯಮಾ ್ಮಕ ವಾಕ್ಯ ಮತ್ತು ಪರ್ಯಾಯಾತ್ಮಕ ವಾಕ್ಯಗಳು. ಯಾವ ವ್ಯವಹಿತ ಅನುಮಾನ ಲ್ಲಿ ಮೂರು ವಾಕ್ಯಗಳು ಒಂದೇ ರೂಪಕ್ಕೆ ಸೇರಿದ್ದರೆ — ಈಗ ನಾವು ನೋಡಿರುವ ್ಯವಹಿತ ಅನುಮಾನದಂತೆ — ಅಂತಹುದಕ್ಕೆ 'ಶುದ್ಧ ವ್ಯವಹಿತ ಅನುಮಾನ' (Pure yllogism) ಎನ್ನುತ್ತಾರೆ. ಆದರೆ ಒಂದು ವ್ಯವಹಿತದಲ್ಲಿ ಎರಡು ಅಥವಾ ಮೂರು ೂಪಗಳ ವಾಕ್ಯಗಳನ್ನೂ ಸೇರಿಸಿ ರಚಿಸಬಹುದು. ಅವುಗಳನ್ನು 'ಮಿಶ್ರ ವ್ಯವಹಿತ ಅನುಮಾನ' (Mixed Syllogism) ಎಂದು ಕರೆಯುತ್ತಾರೆ. ಮುಖ್ಯವಾಗಿ ಇಂತಹ ಮಿಶ್ರ ಜಾತಿಯ ವ್ಯವಹಿತ ಅನುಮಾನಗಳು ಮೂರು :

1. ನಿಯಮಾತ್ಮಕ ವ್ಯವಹಿತ ಅನುಮಾನ (Hypothetical Syllogism)
2. ಪರ್ಯಾಯಾತ್ಮಕ ವ್ಯವಹಿತ ಅನುಮಾನ (Disjunctive Syllogism)
3. ದ್ವೈಧ ಅನುಮಾನ (Dilemma)

ಈಗ ಮೊದಲ ಎರಡು ಮಿಶ್ರ ವ್ಯವಹಿತ ಅನುಮಾನದ ರೂಪಗಳನ್ನು ತಿಳಿಯಲು ಪ್ರಯತ್ನಪಡೋಣ.

## 1. ನಿಯಮಾತ್ಮಕ ವ್ಯವಹಿತ ಅನುಮಾನ[1]

ನಿಯಮಾತ್ಮಕ ವ್ಯವಹಿತ ಅನುಮಾನದಲ್ಲಿ ಮೂರು ವಾಕ್ಯಗಳು ಇರುತ್ತದೆ. ಇದರಲ್ಲಿ ಮೊದಲನೆಯದು ನಿಯಮಾತ್ಮಕ ವಾಕ್ಯ, ಎರಡು ಮತ್ತು ಮೂರನೆಯ ವಾಕ್ಯಗಳು ನಿರಪೇಕ್ಷ. ಮೊದಲ ನಿಯಮಾತ್ಮಕ ವಾಕ್ಯ, ಮೊದಲ ನಿರಪೇಕ್ಷ ವಾಕ್ಯ— ಇವು ಗೃಹೀತ ವಾಕ್ಯಗಳು. ಇವುಗಳ ಆಧಾರದ ಮೇಲೆ ಊಹಿತವಾಗುವ ವಾಕ್ಯ ನಿರಪೇಕ್ಷ ವಾಕ್ಯ.

ಉದಾಹರಣೆ :

ಮಳೆ ಬಿದ್ದರೆ, ಬೆಳೆಯಾಗುತ್ತದೆ } ಗೃಹೀತ ವಾಕ್ಯಗಳು
ಮಳೆ ಬಿದ್ದಿದೆ }

∴ ಬೆಳೆಯಾಗುತ್ತದೆ — ನಿರ್ಣಯ ವಾಕ್ಯ

ಈ ತೆರನಾದ ವ್ಯವಹಿತ ಅನುಮಾನಕ್ಕೆ 'ನಿಯಮಾತ್ಮಕ' ವೆಂದು ಹೆಸರು ಬರಲು ಕಾರಣ ನಿರ್ಣಯವು ಗೃಹೀತ ವಾಕ್ಯಗಳಲ್ಲಿ ನಮೂದಿತವಾಗುವ ನಿಯಮ ಅಥವಾ ಷರತ್ತುಗಳ ಮೇಲೆ ಹೊಂದಿಕೊಂಡಿರುವುದೊಂದೇ ಅಲ್ಲದೆ, ಮೊದಲನೆಯ ಗೃಹೀತ ವಾಕ್ಯವೂ ಒಂದು ನಿಯಮವನ್ನು ಒಳಗೊಂಡಿರುತ್ತದೆ. ನಿಯಮ ಅಥವಾ ಷರತ್ತು ಮೊದಲ ಗೃಹೀತವಾಕ್ಯದ ಲಕ್ಷಣವಾದ್ದರಿಂದ, ವ್ಯವಹಿತ ಅನುಮಾನವೇ ನಿಯಮಾತ್ಮಕವಾಗುತ್ತದೆ.

ಎಲ್ಲ ವ್ಯವಹಿತ ಅನುಮಾನಗಳಿಗೂ ಹಲವು ಸಾಮಾನ್ಯ ನಿಯಮಗಳು ಇರುವಂತೆ ಈ ತೆರನಾದ ಅನುಮಾನಕ್ಕೂ ನಿಯಮಗಳಿವೆ. ಆದರೆ ಅವುಗಳನ್ನು ತಿಳಿಯುವ ಮುನ್ನ ನಿಯಮಾತ್ಮಕ ವಾಕ್ಯದ ಲಕ್ಷಣವನ್ನು ತಿಳಿಯಬೇಕು.

ನಿಯಮಾತ್ಮಕ ವಾಕ್ಯದಲ್ಲಿ ಯಾವುದೋ ಒಂದು ಷರತ್ತು ಅಥವಾ ಪೂರ್ವಭಾವಿ ಯಾದ ಸಂಗತಿ ಇರುತ್ತದೆ. ಈ ಷರತ್ತನ್ನು ಅನುಸರಿಸಿ ಅದರಿಂದ ಉಂಟಾಗುವ ಮತ್ತೊಂದು ಫಲವೂ ಹೇಳಿರುತ್ತದೆ. ಎಂದರೆ ಇಂತಹ ವಾಕ್ಯದಲ್ಲಿ ಸ್ಪಷ್ಟವಾಗಿ ಎರಡು ಭಾಗಗಳಿರುತ್ತವೆ. ಮೊದಲ ಭಾಗ ನಿಯಮ ಅಥವಾ ಷರತ್ತನ್ನು ಹೇಳುತ್ತದೆ. ಇದನ್ನು 'ಕಾರಣ'ಕ್ಕೆ ಹೋಲಿಸಬಹುದು. ಎರಡನೆಯ ಭಾಗ ಆ ನಿಯಮದ ಮೇಲೆ ನಿಂತಿರುವ ಫಲರೂಪವಾದದ್ದು. ಇದನ್ನು 'ಕಾರ್ಯ'ಕ್ಕೆ ಹೋಲಿಸಬಹುದು. ಈ ಎರಡು ಭಾಗ ಗಳನ್ನೂ ಕ್ರಮವಾಗಿ,

---

1. ಇದನ್ನು 'ಕಾಲ್ಪನಿಕ' ವ್ಯವಹಿತ ಅನುಮಾನವೆಂದೂ, 'ಔಪಾಧಿಕ' ವ್ಯವಹಿತ ಅನುಮಾನವೆಂದೂ ಕರೆಯಬಹುದು.

(a) **'ಕಾರಣಾಂಗ'** ಅಥವಾ **'ಪೂರ್ವಾಂಗ'** (Antecedent) ವೆಂದೂ,
(b) **'ಕಾರ್ಯಾಂಗ'** ಅಥವಾ **'ಉತ್ತರಾಂಗ'** (Conseq uent)
ಎಂದೂ ಕರೆಯಬಹುದು.

ಈ ಎರಡು ಭಾಗಗಳಿಗೂ 'ಕಾರಣ-ಕಾರ್ಯ'ಗಳ ಸಂಬಂಧವಿರುವುದರಿಂದ ಕಾರಣವಿದ್ದರೆ, ಕಾರ್ಯ ಹುಟ್ಟುತ್ತದೆ; ಇಲ್ಲದಿದ್ದರೆ ಕಾರ್ಯವಿಲ್ಲ ಎಂದು ಅರ್ಥ ಬರುತ್ತದೆ. ಎಂದರೆ ಇದು ಉಪಾಧಿ ಸೂಚಕವಾದ ವಾಕ್ಯವೆಂದು ಸ್ಪಷ್ಟವಾಗುತ್ತದೆ.

ಇಂತಹ ಔಪಾಧಿಕ ವಾಕ್ಯವನ್ನು ಗೃಹೀತವಾಕ್ಯವಾಗಿ ಅಂಗೀಕರಿಸುವ ವ್ಯವಹಿತ ಅನುಮಾನಕ್ಕೆ **'ನಿಯಮಾತ್ಮಕ ಅನುಮಾನ'**ವೆಂದೋ, **'ಔಪಾಧಿಕ ಅನುಮಾನ'** ಎಂದೋ ಹೆಸರನ್ನು ನೀಡಬಹುದು.

ಹಾಗೆಯೇ ಈ ವ್ಯವಹಿತ ಅನುಮಾನದಲ್ಲಿ ಎರಡು ಗೃಹೀತ ವಾಕ್ಯಗಳಿರುತ್ತವೆ ಎಂದು ಹೇಳಿದ್ದೇವೆ. ಇವುಗಳನ್ನು ನಿರಪೇಕ್ಷ ವ್ಯವಹಿತ ಅನುಮಾನದಲ್ಲಿರುವಂತೆ ಸಾಧ್ಯ ವಾಕ್ಯ ಮತ್ತು ಪಕ್ಷ ವಾಕ್ಯ ಎಂದು ಕರೆಯಲಾಗುವುದಿಲ್ಲ. ಆದ್ದರಿಂದ ಇಲ್ಲಿ ಉಚಿತವಾಗಿ ಔಪಾಧಿಕ ವಾಕ್ಯ ಮೊದಲ ಗೃಹೀತವಾಕ್ಯವಾದ್ದರಿಂದ **'ಔಪಾಧಿಕ ಗೃಹೀತ ವಾಕ್ಯ'** (Hyphothetical major) ವೆಂದೂ, ನಿರಪೇಕ್ಷ ವಾಕ್ಯ ಎರಡನೆಯ ಗೃಹೀತ ವಾಕ್ಯವಾದ್ದರಿಂದ **'ನಿರಪೇಕ್ಷ ಗೃಹೀತ ವಾಕ್ಯ'** (Categorical minor) ಎಂದೂ ಕರೆಯಬಹುದು. ಮೂರನೆಯದಂತೂ **'ನಿರಪೇಕ್ಷ ನಿರ್ಣಯ ವಾಕ್ಯ'** (categorical conclusion.)

ಈಗ ನಿಯಮಾತ್ಮಕ ವ್ಯವಹಿತ ಅನುಮಾನದ ನಿಯಮಗಳನ್ನು ತಿಳಿಯೋಣ.

## ನಿಯಮಾತ್ಮಕ ವ್ಯವಹಿತ ಅನುಮಾನದ ನಿಯಮಗಳು

1. ನಿರಪೇಕ್ಷ ಗೃಹೀತ ವಾಕ್ಯವು, ಔಪಾಧಿಕ ವಾಕ್ಯದ **ಪೂರ್ವಾಂಗವನ್ನು ಅಂಗೀಕರಿಸಬೇಕು.** ಹಾಗಿದ್ದರೆ, ನಿರಪೇಕ್ಷ ನಿರ್ಣಯ ವಾಕ್ಯವು ಔಪಾಧಿಕ ವಾಕ್ಯದ ಉತ್ತರಾಂಗವನ್ನು ಅಂಗೀಕರಿಸುತ್ತದೆ.

   ಇದಕ್ಕೆ ವಿರುದ್ಧವಾದರೆ 'ದೋಷ' ಉಂಟಾಗುತ್ತದೆ.

2. ನಿರಪೇಕ್ಷ ಗೃಹೀತ ವಾಕ್ಯವು, ಔಪಾಧಿಕ ವಾಕ್ಯದ **ಉತ್ತರಾಂಗವನ್ನು ನಿರಾಕರಿಸಬೇಕು.** ಹಾಗಿದ್ದರೆ, ನಿರಪೇಕ್ಷ ನಿರ್ಣಯ ವಾಕ್ಯವು ಔಪಾಧಿಕ ವಾಕ್ಯದ ಪೂರ್ವಾಂಗವನ್ನು ನಿಷೇಧಿಸುತ್ತದೆ.

   ಇದಕ್ಕೆ ವಿರುದ್ಧವಾದರೆ 'ದೋಷ' ಉಂಟಾಗುತ್ತದೆ.

**ಉದಾಹರಣೆಗಳು : ನಿಯಮ ಒಂದು**

| | |
|---|---|
| ಸೂರ್ಯನಿದ್ದರೆ, ಬೆಳಕು ಇರುತ್ತದೆ | (ಔಪಾಧಿಕ ಗೃಹೀತ ವಾಕ್ಯ) |
| ಸೂರ್ಯನಿದ್ದಾನೆ | (ನಿರಪೇಕ್ಷ ಗೃಹೀತ ವಾಕ್ಯ) |
| ∴ ಬೆಳಕು ಇದೆ | (ನಿರ್ಣಯ ವಾಕ್ಯ) |

ವಿವರಣೆ :

1. ಇಲ್ಲಿ 'ಔಪಾಧಿಕ' ಗೃಹೀತ ವಾಕ್ಯದಲ್ಲಿ 'ಸೂರ್ಯನಿದ್ದರೆ' ಎನ್ನುವುದು 'ಕಾರಣಾಂಗ' ಅಥವಾ 'ಪೂರ್ವಾಂಗ'. ಇದು ಕಾರಣಕ್ಕೆ ಸಮಾನವಾದುದು. 'ಬೆಳಕು ಇರುತ್ತದೆ' ಎನ್ನುವುದು 'ಕಾರ್ಯಾಂಗ' ಅಥವಾ 'ಉತ್ತರಾಂಗ' ಇದು ಕಾರ್ಯಕ್ಕೆ ಸಮಾನವಾದುದು.

2. ನಿರಪೇಕ್ಷ ಗೃಹೀತ ವಾಕ್ಯವು 'ಕಾರಣಾಂಗ'ವನ್ನು ಅಂಗೀಕರಿಸುತ್ತದೆ. ಎಂದರೆ ಕಾರಣ ಇದೆ ಎಂದು ಹೇಳುತ್ತದೆ. ಇದನ್ನು ಅನುಸರಿಸಿ

3. ನಿರ್ಣಯ ವಾಕ್ಯವು 'ಕಾರ್ಯಾಂಗ'ವನ್ನು ಅಂಗೀಕರಿಸುತ್ತದೆ. ಎಂದರೆ ಕಾರ್ಯವೂ ಇದೆ ಎಂದು ಒಪ್ಪಿಕೊಳ್ಳುತ್ತದೆ.

'ಕಾರಣಾಂಗದ ಅಂಗೀಕಾರ', ಮತ್ತು ಅದರ ಆಧಾರದ ಮೇಲೆ 'ಕಾರ್ಯಾಂಗದ ಅನುಮೋದನೆ' ನಿಯಮಾತ್ಮಕ ವ್ಯವಹಿತ ಅನುಮಾನದ ತಾರ್ಕಿಕ ಸತ್ಯಕ್ಕೆ ಗುರುತು. ಈ ರೀತಿಯ ನಿಯಮಾತ್ಮಕ ವ್ಯವಹಿತ ಅನುಮಾನಕ್ಕೆ ಪಾರಿಭಾಷಿಕವಾಗಿ 'Modus Ponens' ಎಂದು ಹೆಸರು. ಇದನ್ನು 'ಅಂಗೀಕಾರ ಅಥವಾ **ಅನುಮೋದನೆಯ ನಿಲುವು'** ಎನ್ನಬಹುದು.

ಈ ಅಂಗೀಕಾರ ಕಾರಣಾಂಗಕ್ಕೆ ಅನ್ವಯವಾಗಬೇಕೇ ಹೊರತು ಕಾರ್ಯಾಂಗದ ವಿಚಾರವಾಗಿರಕೂಡದು. ಹೀಗಾದಲ್ಲಿ ಈ ಗುಂಪಿನ ವ್ಯವಹಿತ ಅನುಮಾನದ ನಿಯಮವನ್ನು ಉಲ್ಲಂಘಿಸಿದಂತಾಗಿ **ತಾರ್ಕಿಕ ದೋಷಕ್ಕೆ** ಎಡೆಕೊಟ್ಟಂತಾಗುತ್ತದೆ. ಉದಾ :

ಸೂರ್ಯನಿದ್ದರೆ ಬೆಳಕು ಇರುತ್ತದೆ
ಬೆಳಕು ಇದೆ
∴ ಸೂರ್ಯನಿದ್ದಾನೆ

ಇಲ್ಲಿ ನಿರಪೇಕ್ಷ ಗೃಹೀತ ವಾಕ್ಯ ಔಪಾಧಿಕ ಗೃಹೀತ ವಾಕ್ಯದ ಕಾರ್ಯಾಂಗವನ್ನು ಅನುಮೋದಿಸುತ್ತದೆ. ಇದರಿಂದಾಗಿ ನಿರ್ಣಯವಾಕ್ಯ ಕಾರಣಾಂಗವನ್ನು ಅನುಮೋದಿಸ

ದೆ. ಆದರೆ 'ಬೆಳಕು ಇದೆ' ಎಂದರೆ ಕೇವಲ ಕಾರ್ಯವನ್ನು ಒಪ್ಪಿಕೊಂಡಂತಾಯಿತು. ಕಾರ್ಯಕ್ಕೆ ಕಾರಣ ಸೂರ್ಯನೇ ಅಲ್ಲದಿರಬಹುದು. ರಾತ್ರಿಯಲ್ಲಿ ಬೆಳಕು ಇರುತ್ತದೆ, ರೆ ಸೂರ್ಯನಿರುವುದಿಲ್ಲ. ಈ ಕಾರಣದಿಂದ ನಿರ್ಣಯವಾಕ್ಯ ತಪ್ಪಾಗುತ್ತದೆ.

ಈ ದೋಷಕ್ಕೆ **'ಕಾರ್ಯಾಂಗ'** ಅಥವಾ **'ಉತ್ತರಾಂಗದ ಅಂಗೀಕಾರ'** ನ್ನುತ್ತಾರೆ.

**ಉದಾಹರಣೆಗಳು : ನಿಯಮ ಎರಡು**

| | |
|---|---|
| ಸೂರ್ಯನಿದ್ದರೆ ಬೆಳಕು ಇರುತ್ತದೆ | (ಔಪಾಧಿಕ ಗೃಹೀತ ವಾಕ್ಯ) |
| ಬೆಳಕು ಇಲ್ಲ | (ನಿರಪೇಕ್ಷ ಗೃಹೀತ ವಾಕ್ಯ) |
| ∴ ಸೂರ್ಯನಿಲ್ಲ | (ನಿರಪೇಕ್ಷ ನಿರ್ಣಯ ವಾಕ್ಯ) |

ವಿವರಣೆ :

(a) ಇಲ್ಲಿ ಪ್ರಥಮ ಗೃಹೀತ ವಾಕ್ಯದಲ್ಲಿ 'ಸೂರ್ಯನಿದ್ದರೆ' ಎನ್ನುವುದು 'ಕಾರಣಾಂಗ', 'ಬೆಳಕು ಇರುತ್ತದೆ' ಎನ್ನುವುದು 'ಕಾರ್ಯಾಂಗ'. ಇವೆರಡಕ್ಕೂ ಕಾರಣ-ಕಾರ್ಯಗಳ ಸಂಬಂಧವಿರುತ್ತದೆ.

(b) ನಿರಪೇಕ್ಷ ಗೃಹೀತವಾಕ್ಯವು ಔಪಾಧಿಕ ವಾಕ್ಯದಲ್ಲಿನ ಕಾರ್ಯಾಂಗ ಅಥವಾ ಉತ್ತರಾಂಗವನ್ನು **ನಿರಾಕರಿಸಬೇಕು**. ಎಂದರೆ ಯಾವ ಕಾರ್ಯವೂ ಅಸ್ತಿತ್ವದಲ್ಲಿಲ್ಲ ಎಂದು. ಇದನ್ನು ಅನುಸರಿಸಿ

(c) ನಿರ್ಣಯ ವಾಕ್ಯ ಕಾರಣಾಂಗ ಅಥವಾ ಪೂರ್ವಾಂಗವೂ ಅಸ್ತಿತ್ವದಲ್ಲಿಲ್ಲ ಎಂದು ಹೇಳುತ್ತದೆ. ಎಂದರೆ ಕಾರ್ಯವೇ ಇಲ್ಲದಿದ್ದರೆ ಅಂತಹ ಕಾರ್ಯವನ್ನುಂಟುಮಾಡುವ ಎಷ್ಟೇ ಕಾರಣಗಳಿದ್ದರೂ, ಅವೆಲ್ಲವೂ ಇಲ್ಲವಾಗಿರುತ್ತವೆ. ಎಂದರೆ ತಾರ್ಕಿಕವಾಗಿ ವಿಚಾರವು ಸತ್ಯವಾಗಿರುತ್ತವೆ.

ಕಾರ್ಯಾಂಗದ ನಿರಾಕರಣೆ ಮತ್ತು ಅದರ ಆಧಾರದ ಮೇಲೆ ಕಾರಣಾಂಗದ ನಿರಾಕರಣೆಯು ವಿಚಾರದ ತಾರ್ಕಿಕ ಸತ್ಯಕ್ಕೆ ಕಾರಣವಾಗುತ್ತದೆ. ಇಂತಹ ನಿಯಮಾತ್ಮಕ ವ್ಯವಹಿತ ಅನುಮಾನಕ್ಕೆ ಪಾರಿಭಾಷಿಕವಾಗಿ 'Modus Tollens' ಎಂದು ಹೆಸರು. ಇದನ್ನು **'ನಿರಾಕರಣೆಯ ನಿಲುವು'** ಎನ್ನಬಹುದು.

ನಿರಪೇಕ್ಷ ಗೃಹೀತ ವಾಕ್ಯವು ಕಾರ್ಯಾಂಗವನ್ನು ನಿರಾಕರಿಸಬಹುದೇ ಹೊರತು ಕಾರಣಾಂಗವನ್ನು ನಿರಾಕರಿಸಲಾಗದು. ಹಾಗಾದ ಪಕ್ಷದಲ್ಲಿ **ತಾರ್ಕಿಕ ದೋಷಕ್ಕೆ** ಡೆಯಾಗುತ್ತದೆ.

ಉದಾಹರಣೆ :

ಸೂರ್ಯನಿದ್ದರೆ ಬೆಳಕು ಇರುತ್ತದೆ
ಸೂರ್ಯನಿಲ್ಲ
∴ ಬೆಳಕು ಇಲ್ಲ

ಸೂರ್ಯನಿಲ್ಲದಿದ್ದರೂ ನಮ್ಮ ಅನುಭವದಲ್ಲಿ ಬೆಳಕು ಇರುವುದನ್ನು ಕಂಡಿದ್ದೇವೆ. ಆದ್ದರಿಂದ ಇಲ್ಲಿಯು ತರ್ಕದ ರೀತಿಯಲ್ಲಿ ದೋಷವಿರಲೇಬೇಕು. ಎಂದರೆ ಗೃಹೀತವಾಕ್ಯ ಯಾವುದೇ ಒಂದು ಕಾರಣ ಅಸ್ತಿತ್ವದಲ್ಲಿಲ್ಲ ಎಂದರೆ, ಎಲ್ಲ ಕಾರಣಗಳು ಇಲ್ಲ ಎಂದು ಹೇಳುವಂತಿಲ್ಲ. ಚಂದ್ರನಿರಬಹುದು, ನಕ್ಷತ್ರಗಳಿರಬಹುದು, ಎಣ್ಣೆ ದೀಪ ಇರಬಹುದು. ಆದ್ದರಿಂದ ಬೆಳಕು ಇರುತ್ತದೆ. ಆದ್ದರಿಂದ ಕಾರಣಾಂಗದ ನಿರಾಕರಣೆಯಿಂದ ನಿರ್ಣಯ ವಾಕ್ಯದಲ್ಲಿ ಕಾರ್ಯಾಂಗದ ನಿರಾಕರಣೆ ಅಸಂಬದ್ಧವಾಗಬಹುದು.

ಇಂತಹ '**ಕಾರಣಾಂಗದ ನಿರಾಕರಣೆಯು**' ದೋಷವೆನಿಸುತ್ತದೆ. ಇದನ್ನು 'ಕಾರಣಾಂಗದ ನಿರಾಕರಣೆ' ಎನ್ನುತ್ತಾರೆ.

ಹೀಗೆ ನಿಯಮಾತ್ಮಕ ವ್ಯವಹಿತ ಅನುಮಾನದಲ್ಲಿ ಎರಡು ತಾರ್ಕಿಕ ರೂಪ ಅಥವಾ ನಿಲವುಗಳಿರುತ್ತವೆ. ಅವೆರಡೂ ತಾರ್ಕಿಕವಾಗಿ ಸತ್ಯವಾಗಿರುತ್ತವೆ. ಅವನ್ನು ನಿಯಮಾತ್ಮಕ ವ್ಯವಹಿತ ಅನುಮಾನದ **ಸಂಗತ ನಿಲವು**ಗಳು' (Valid Moods) ಎನ್ನುತ್ತಾರೆ'

1. Modus Ponens : 'ಅಂಗೀಕಾರ ಅಥವಾ ಅನುಮೋದನೆಯ ನಿಲವು'
2. Modus Tollens : 'ನಿರಾಕರಣೆಯ ನಿಲವು'

ಈ ಎರಡು ತಾರ್ಕಿಕ ನಿಲವುಗಳನ್ನು ಅಲ್ಲಗಳೆದರೆ ಎರಡು ರೀತಿಯ ತಾರ್ಕಿಯ ದೋಷಗಳಿಗೆ ಅವಕಾಶವಾಗುತ್ತದೆ. ಆ ದೋಷಗಳು

1. 'ಕಾರ್ಯಾಂಗ ಅಥವಾ ಉತ್ತರಾಂಗದ ಅಂಗೀಕಾರ'
2. 'ಕಾರಣಾಂಗ ಅಥವಾ ಪೂರ್ವಾಂಗದ ನಿರಾಕರಣೆ'

## C. ಪರ್ಯಾಯಾತ್ಮಕ ವ್ಯವಹಿತ ಅನುಮಾನ[1] — (Disjunctive Syllogism)

**ಅದರ ಸ್ವರೂಪ :**

ವ್ಯವಹಿತ ಅನುಮಾನದ ಮಿಶ್ರ ರೂಪಗಳಲ್ಲಿ ಪರ್ಯಾಯಾತ್ಮಕ ವ್ಯವಹಿತ ಅನುಮಾನವೂ ಒಂದು. ನಿಯಮಾತ್ಮಕ ಅನುಮಾನದಂತೆಯೇ ಇದೂ ಕೂಡ ಸಾಪೇಕ್ಷ ಅಥವಾ ಔಪಾಧಿಕ ಅನುಮಾನ.

---

1. ಇದನ್ನು 'ವೈಕಲ್ಪಿಕ' ವ್ಯವಹಿತ ಅನುಮಾನವೆಂದೂ ಕರೆಯುತ್ತಾರೆ.

ಈ ಅನುಮಾನದಲ್ಲಿ ಮೊದಲ ಗೃಹೀತ ವಾಕ್ಯ ಪರ್ಯಾಯಾತ್ಮಕ, ಎರಡನೆಯ ...ೀತ ವಾಕ್ಯವು ನಿರಪೇಕ್ಷ ಮತ್ತು ಮೂರನೆಯ ನಿರ್ಣಯ ವಾಕ್ಯ ನಿರಪೇಕ್ಷವಾಗಿರು...ದೆ.

'ಪರ್ಯಾಯಾತ್ಮಕ' ಎಂದರೆ ಯಾವುದಾದರೂ ಒಂದು ವಿಚಾರಕ್ಕೆ ಸಂಬಂಧಪಟ್ಟ ...ಗೆ ಎರಡು ಅಥವಾ ಹೆಚ್ಚಿನ ವಿಶೇಷಣಗಳನ್ನು ಹೇಳಬಹುದಂಥಾದ್ದು. ಉದಾಹರಣೆಗೆ ... ಅಪರಿಚಿತನ ಬಗ್ಗೆ ನನುಗೆ ಸಂಶಯ ಬಂದು ಅವನು ಫ್ರಾನ್ಸ್ ಅಥವಾ ಜರ್ಮನಿ ...ವಾ ರಷ್ಯ ದೇಶದವನೆಂದು ಅನಿಸಬಹುದು. ಹೀಗೆ ಪರ್ಯಾಯಾತ್ಮಕ ವಿಶೇಷಣ ...ನ್ನು ವ್ಯಕ್ತಪಡಿಸುವ ವಾಕ್ಯಕ್ಕೆ ಪರ್ಯಾಯಾತ್ಮಕ ವಾಕ್ಯ ಎಂದು ಹೆಸರು. ಇಂತಹ ...ಕ್ಯದಲ್ಲಿ ನೀಡಿರುವ ಎಲ್ಲ ವಿಶೇಷಣಗಳೂ ಒಂದೇ ಕಾಲದಲ್ಲಿ ಒಂದು ವಸ್ತುವಿಗೆ ...ಯವಾಗುವುದಿಲ್ಲ. ಯಾವುದಾದರೂ ಒಂದು ವಿಶೇಷಣ ಅನ್ವಯವಾದರೆ ಮಿಕ್ಕವೆಲ್ಲ ...ವುದಿಲ್ಲ. ಇದು ಪರ್ಯಾಯಾತ್ಮಕ ವಾಕ್ಯದ ಲಕ್ಷಣ.

ಈ ಲಕ್ಷಣವನ್ನು ಅನುಸರಿಸಿ ವ್ಯವಹಿತ ಅನುಮಾನವನ್ನು ರಚಿಸುತ್ತೇವೆ.

ಉದಾಹರಣೆ :

1. ಇವನು ಫ್ರಾನ್ಸ್ ಅಥವಾ ಇಂಗ್ಲೆಂಡಿನವನು } ಗೃಹೀತ ವಾಕ್ಯಗಳು
   ಇವನು ಇಂಗ್ಲೆಂಡಿನವನಲ್ಲ
   ∴ ಇವನು ಫ್ರಾನ್ಸ್ ದೇಶದವನು — ನಿರ್ಣಯ ವಾಕ್ಯ

2. A ಯು B ಅಥವಾ C — ಸಾಧ್ಯ ವಾಕ್ಯ
   A ಯು B — ಪಕ್ಷ ವಾಕ್ಯ
   ∴ A ಯು C ಅಲ್ಲ — ನಿರ್ಣಯ

**ಪರ್ಯಾಯಾತ್ಮಕ ವ್ಯವಹಿತ ಅನುಮಾನದ ನಿಯಮಗಳು**

1. ಎರಡನೆಯ ಗೃಹೀತ ವಾಕ್ಯವಾದ ನಿರಪೇಕ್ಷ ವಾಕ್ಯವು, ಮೊದಲ ಗೃಹೀತ ವಾಕ್ಯವಾದ ಪರ್ಯಾಯಾತ್ಮಕ ವಾಕ್ಯದಲ್ಲಿರಬಹುದಾದ ಒಂದು ಪರ್ಯಾಯವನ್ನು ನಿರಾಕರಿಸುತ್ತದೆ.

   ಇದನ್ನು ಅನುಸರಿಸಿ ನಿರ್ಣಯ ವಾಕ್ಯವು ಉಳಿದ ಪರ್ಯಾಯವನನು ಅನುಮೋದಿಸುತ್ತದೆ.

   ಎಂದರೆ ಪರ್ಯಾಯಗಳಲ್ಲಿ ಒಂದನ್ನು ನಿರಾಕರಿಸುವುದರ ಮೂಲಕ ಮತ್ತೊಂದನ್ನು ಅಂಗೀಕರಿಸುವುದು.

2. ನಿರಪೇಕ್ಷ ಗೃಹೀತ ವಾಕ್ಯ ಪರ್ಯಾಯಾತ್ಮಕ ಗೃಹೀತ ವಾಕ್ಯದಲ್ಲಿನ ಪರ್ಯಾಯಗಳಲ್ಲೊಂದನ್ನು ಅಂಗೀಕರಿಸುತ್ತದೆ.

ಇದನ್ನು ಅನುಸರಿಸಿ ನಿರ್ಣಯ ವಾಕ್ಯವು ಉಳಿದ ಪರ್ಯಾಯವನ್ನು ನಿರಾಕರಿಸುತ್ತದೆ.

ಎಂದರೆ ಪರ್ಯಾಯಗಳಲ್ಲಿ ಒಂದನ್ನು ಅಂಗೀಕರಿಸುವುದರ ಮೂಲಕ ಮತ್ತೊಂದನ್ನು ನಿರಾಕರಿಸುವುದು.

ಉದಾಹರಣೆಗಳು : ನಿಯಮ ಒಂದು :

| | |
|---|---|
| ರಾಮನು ಪಟ್ಟಾಭಿಷೇಕ ಮಾಡಿಕೊಳ್ಳಬೇಕು ಅಥವಾ ವನವಾಸಕ್ಕೆ ತೆರಳಬೇಕು<br>ರಾಮನು ಪಟ್ಟಾಭಿಷೇಕ ಮಾಡಿಕೊಳ್ಳಲಾಗದು | ಗೃಹೀತ ವಾಕ್ಯಗಳು |
| ∴ ರಾಮನು ವನವಾಸಕ್ಕೆ ತೆರಳಬೇಕು | ನಿರ್ಣಯ ವಾಕ್ಯ |

ಇಲ್ಲಿ ನಿರಾಕರಣೆಯ ಮೂಲಕ ಅಂಗೀಕಾರ ಆಗಿದೆ. ಇಂತಹ ಪರ್ಯಾಯಾತ್ಮಕ ವ್ಯವಹಿತ ಅನುಮಾನಕ್ಕೆ Modus Tollendo Ponens ಎಂದು ಹೆಸರು. ಎಂದರೆ 'ನಿರಾಕರಣ ಮೂಲವಾದ ಅಂಗೀಕಾರದ ನಿಲವು.'

ನಿಯಮ ಎರಡು :

| | |
|---|---|
| ಭಾರತಕ್ಕೆ ಪರರಾಷ್ಟ್ರಗಳು ಮಿತ್ರರು ಅಥವಾ ಶತ್ರುಗಳು<br>ಭಾರತಕ್ಕೆ ಪರರಾಷ್ಟ್ರಗಳು ಮಿತ್ರರು | ಗೃಹೀತ ವಾಕ್ಯಗಳು |
| ∴ ಭಾರತಕ್ಕೆ ಪರರಾಷ್ಟ್ರಗಳು ಶತ್ರುಗಳಲ್ಲ | ನಿರ್ಣಯ ವಾಕ್ಯ |

ಇಲ್ಲಿ ಅಂಗೀಕಾರದ ಮೂಲಕ ನಿರಾಕರಣೆ ಆಗಿದೆ. ಇಂತಹ ಪರ್ಯಾಯಾತ್ಮಕ ವ್ಯವಹಿತ ಅನುಮಾನಕ್ಕೆ 'ಅಂಗೀಕಾರ ಮೂಲವಾದ ನಿರಾಕರಣೆಯ ನಿಲವು' (Modus Ponendo Tollens) ಎಂದು ಹೆಸರು.

ಅನೇಕ ತಾರ್ಕಿಕರು ಈ ಎರಡು 'ನಿಲವು'ಗಳಲ್ಲಿ ಮೊದಲನೆಯ, ಎಂದರೆ 'ನಿರಾಕರಣ ಮೂಲವಾದ ಅಂಗೀಕಾರ' ತರ್ಕ ಸಮಂಜಸವಾಗಿದ್ದು ನಿರ್ಣಯ ವಾಕ್ಯವು ಸತ್ಯವನ್ನು ಪ್ರತಿಬಿಂಬಿಸುತ್ತದೆಯೆಂದೂ ಆದರೆ ಇದೇ ರೀತಿಯಲ್ಲಿ ಅಸಂದಿಗ್ಧವಾಗಿ ಸತ್ಯವನ್ನು ಎರಡನೆಯ 'ನಿಲವು' ವ್ಯಕ್ತ ಪಡಿಸುವುದಿಲ್ಲವೆಂದೂ ಹೇಳುತ್ತಾರೆ.

ಅದಕ್ಕೆ ಕಾರಣವಿಷ್ಟೇ. ಪರ್ಯಾಯಾತ್ಮಕ ವಾಕ್ಯದಲ್ಲಿರಬಹುದಾದ ಪರ್ಯಾಯಗಳು ಎರಡು ಬಗೆಯಾಗಿರಬಹುದು.

1. ಅವುಗಳ ಕ್ಷೇತ್ರ ಪರಸ್ಪರ ಅಂತರ್ಗತ ಅಥವಾ ಸೇರಿಕೊಳ್ಳುವಂತಿರಬಹುದು (Inclusive).

ಉದಾಹರಣೆ: ಅವನು ಬುದ್ಧಿವಂತ ಅಥವಾ ಉಪಾಯಗಾರ.

ಇಲ್ಲಿನ ಎರಡು ಪರ್ಯಾಯಗಳಲ್ಲಿ ಅಂತರ ಕಂಡು ಹಿಡಿಯುವುದು ಕಷ್ಟ.

2. ಅವುಗಳ ಕ್ಷೇತ್ರ ಪರಸ್ಪರ ಬಾಹ್ಯ ಅಥವಾ ಬಹಿಷ್ಕರಿಸುವಂತಿದ್ದು, ನಿಶ್ಶೇಷವಾಗಿರಬಹುದು (exclusive and exhaustive)

ಉದಾಹರಣೆ: ಅವನು ದಡ್ಡ ಅಥವಾ ಮೇಧಾವಿ.

ಇಲ್ಲಿನ ಎರಡು ಪರ್ಯಾಯಗಳ ಅಂತರ ಸುಲಭವಾಗಿ ಕಂಡುಹಿಡಿಯಬಹುದಾಗಿದೆ.

ಹೀಗೆ 'ಅಂತರ್ಗತ ಪರ್ಯಾಯಗಳ' ವ್ಯತ್ಯಾಸ ಸುಲಭವಾಗಿ ಕಾಣದಿದ್ದರೆ, ...ಷ ಪರ್ಯಾಯಗಳ ವ್ಯತ್ಯಾಸ ಸುಲಭವಾಗಿ ಪ್ರಕಟವಾಗುತ್ತದೆ.

ಎಲ್ಲಿ ಪರ್ಯಾಯಾತ್ಮಕ ವ್ಯವಹಿತ ಅನುಮಾನದ ಪ್ರಥಮ ಗೃಹೀತ ವಾಕ್ಯ ...ರ್ಗತ ಪರ್ಯಾಯಗಳನ್ನು ಸೂಚಿಸುತ್ತದೋ ಅಲ್ಲಿ 'ನಿರಾಕರಣ ಮೂಲಕವಾದ ...ೀಕಾರದ ನಿಲವು' ಯಾವಾಗಲೂ ನಿರ್ದೋಷವಾದ ನಿರ್ಣಯ ವಾಕ್ಯವನ್ನು ...ತ್ತದೆ. ಆದರೆ 'ಅಂಗೀಕಾರದ ಮೂಲವಾದ ನಿರಾಕರಣೆಯ ನಿಲವು' ದೋಷಯುಕ್ತ ...ಬಹುದು.

ಎಲ್ಲಿ ಪರ್ಯಾಯಾತ್ಮಕ ವಾಕ್ಯದಲ್ಲಿ ಪರ್ಯಾಯಗಳು ನಿಶ್ಶೇಷವಾಗಿರುತ್ತವೋ ...ಅನುಮಾನವು ಯಾವ 'ನಿಲವನ್ನೂ' ತಾಳಬಹುದು. ಎಂದರೆ 'ನಿರಾಕರಣೆಯ ...ಲಕ ಅಂಗೀಕಾರ' ಅಥವಾ 'ಅಂಗೀಕಾರದ ಮೂಲವಾದ ನಿರಾಕರಣೆ' ಯಾವ ...ನ್ನು ಅನುಸರಿಸಿದರೂ ನಿರ್ಣಯ ವಾಕ್ಯವು ಸತ್ಯವನ್ನು ಪ್ರಕಟಗೊಳಿಸುತ್ತದೆ.

ಆದ್ದರಿಂದ ಅನುಮಾನದ ಗೃಹೀತ ವಾಕ್ಯದಲ್ಲಿನ ಪರ್ಯಾಯ ಶಬ್ದಗಳ ಸ್ವಭಾವ ಅನುಸರಿಸಿ ದೋಷಗಳನ್ನು ತಪ್ಪಿಸಿಕೊಳ್ಳಬೇಕು.

## ...ದ್ವೈಧ ಅನುಮಾನ (Dilemma)

ಇಲ್ಲಿಯವರೆಗೆ ವ್ಯವಹಿತ ಅನುಮಾನದ ಮೂರು ರೂಪಗಳನ್ನು ಹೇಳಿದ್ದೇವೆ. ...ಕ್ಷ ವ್ಯವಹಿತ, ನಿಯಮಾತ್ಮಕ ವ್ಯವಹಿತ ಮತ್ತು ಪರ್ಯಾಯಾತ್ಮಕ ವ್ಯವಹಿತ. ...ಂದು ವ್ಯವಹಿತ ಅನುಮಾನ 'ದ್ವೈಧ'. ಇದು ಮಿಶ್ರಜಾತಿಯ ಅನುಮಾನ. ...ಪರಿಚಯವನ್ನು ಸೂಕ್ಷ್ಮವಾಗಿ ಮಾಡಿಕೊಳ್ಳೋಣ.

ಇದರಲ್ಲಿಯೂ ಮೂರು ಹಂತಗಳಿರುತ್ತವೆ. ಎಂದರೆ ಎರಡು ಗೃಹೀತ ವಾಕ್ಯಗಳು ಮತ್ತು ಒಂದು ನಿರ್ಣಯ ವಾಕ್ಯ. ಮೊದಲ ಗೃಹೀತ ವಾಕ್ಯವು ಸಂಯುಕ್ತ ನಿಯಮಾತ್ಮಕ ವಾಕ್ಯವಾಗಿರುತ್ತದೆ. ಎಂದರೆ ಅಲ್ಲಿ ಎರಡು ನಿಯಮಾತ್ಮಕ ವಾಕ್ಯವಿರುತ್ತದೆ. ಎರಡನೆಯ ಗೃಹೀತ ವಾಕ್ಯ ಪರ್ಯಾಯಾತ್ಮಕವಾಗಿಯೊ, ಮೂರನೆಯ ನಿರ್ಣಯ ವಾಕ್ಯ ನಿರಪೇಕ್ಷವಾಗಿಯೋ, ಪರ್ಯಾಯಾತ್ಮಕವಾಗಿಯೋ ಇರುತ್ತದೆ. ಎಂದರೆ ದ್ವೈಧ ಅನುಮಾನದಲ್ಲಿ ಮೂರು ತರಹೆಯ ವಾಕ್ಯಗಳೂ ಸೇರಿರುತ್ತವೆ. ಈ ಅನುಮಾನದ ರೀತಿಯನ್ನು ಕೋಡುಗಳುಳ್ಳ ಗೂಳಿಗೆ ಹೋಲಿಸುತ್ತಾರೆ. ತೀಕ್ಷ್ಣ ಕೋಡುಗಳಿಂದ ನಮ್ಮನ್ನು ತಿವಿಯಲು ಬರುವ ಗೂಳಿಯನ್ನು ಎದುರಿಸುವ ಪರಿಸ್ಥಿತಿಗೆ ನಾವು ಬಂದಾಗ ನಮಗೆ ಆಗುವ ಅನುಭವ ಈ ದ್ವೈಧವನ್ನು ಎದುರಿಸಿದಾಗ ಬರುತ್ತದೆ. ದ್ವೈಧ ರೂಪದ ಸವಾಲನ್ನು ಹಾಕುವುದು ಜಾಣ್ಮೆ, ಅದನ್ನು ತಪ್ಪಿಸಿಕೊಳ್ಳುವುದೂ ಜಾಣ್ಮೆ. ಯಾರನ್ನಾದರೂ ಯಾವುದಾದರೂ ರೀತಿಯಲ್ಲಿ ಆರೋಪಿಸಬೇಕೆಂದು ಉದ್ದೇಶಪಟ್ಟುಕೊಂಡು ಈ ಮುಂದಿನ ದ್ವೈಧವನ್ನು ಪ್ರಯೋಗಿಸಬಹುದು.

1. ನೀನು ವಿದೇಶೀಯನಾಗಿದ್ದರೆ, ಗೂಢಚಾರನಾಗಿರಬೇಕು ; ಸ್ವದೇಶೀಯನಾಗಿದ್ದರೆ ನಕ್ಸಲೀಯನಾಗಿರಬೇಕು.
2. ನೀನು ವಿದೇಶೀಯ ಅಥವಾ ಸ್ವದೇಶೀಯ
3. ಆದ್ದರಿಂದ ನೀನು ಗೂಢಚಾರ ಅಥವಾ ನಕ್ಸಲೀಯ (ಆದ್ದರಿಂದ ಶಿಕ್ಷೆಗೆ ಅರ್ಹನಾಗಿದ್ದೀಯೆ)

ಮೊದಲ ವಾಕ್ಯ : ಸಂಯುಕ್ತ ನಿಯಮಾತ್ಮಕ ವಾಕ್ಯಗಳು
ಎರಡನೆಯದು : ಪರ್ಯಾಯಾತ್ಮಕ
ಮೂರನೆಯದು : ಪರ್ಯಾಯಾತ್ಮಕ

## ದ್ವೈಧ ಅನುಮಾನದ ನಿಯಮಗಳು

ಇಲ್ಲಿಯೂ ಕೂಡ ನಿಯಮಾತ್ಮಕ ಅನುಮಾನದ ನಿಯಮಗಳನ್ನು ಪಾಲಿಸಬೇಕು. ಎಂದರೆ,

1. ಎರಡನೆಯ ಗೃಹೀತ ವಾಕ್ಯವಾದ ಪರ್ಯಾಯಾತ್ಮಕ ವಾಕ್ಯದಲ್ಲಿ ಬರುವ ಪರ್ಯಾಯಗಳು ಮೊದಲ ಗೃಹೀತ ವಾಕ್ಯದ ಕಾರಣಾಂಗಗಳನ್ನು ಅನುಮೋದಿಸುತ್ತವೆ, ಅಥವಾ ಕಾರ್ಯಾಂಗಗಳನ್ನು ನಿರಾಕರಿಸುತ್ತವೆ. ಆಗ

2. ನಿರ್ಣಯ ವಾಕ್ಯವು ಮೊದಲ ವಾಕ್ಯದ ಕಾರ್ಯಾಂಗಗಳನ್ನು ಅನುಮೋದಿಸುತ್ತದೆ ಅಥವಾ ಕಾರಣಾಂಗಗಳನ್ನು ನಿರಾಕರಿಸುತ್ತದೆ.

ಹೀಗಾದರೆ ಮಾತ್ರ ಈ ಅನುಮಾನದ ರೂಪಕ್ಕೆ ಸಂಬಂಧಪಟ್ಟ ನಿಯಮಗಳನ್ನು ಾಲಿಸಿದಂತಾಗುತ್ತದೆ.

1. ಪರ್ಯಾಯಾತ್ಮಕ ವಾಕ್ಯವು ಮೊದಲ ಗೃಹೀತ ವಾಕ್ಯದ ಕಾರ್ಯಾಂಗವನ್ನು ಅನುಮೋದಿಸಿದರೆ ಅದಕ್ಕೆ **'ರಚನಾತ್ಮಕ ದ್ವೈಧ'** (Constructive dilemma) ಎಂದು ಹೆಸರು.
2. ಕಾರ್ಯಾಂಗವನ್ನು ನಿರಾಕರಿಸಿದರೆ ಅದಕ್ಕೆ **'ಧ್ವಂಸಾತ್ಮಕ ದ್ವೈಧ'** (Destructive dilemma) ಎಂದು ಹೆಸರು.

ಹಾಗೆಯೇ

1. ನಿರ್ಣಯ ವಾಕ್ಯವು ನಿರಪೇಕ್ಷ ವಾಕ್ಯವಾಗಿದ್ದರೆ ಅದಕ್ಕೆ 'ಸರಳ ದ್ವೈಧ' ಎಂದು ಹೆಸರು ;
2. ಪರ್ಯಾಯಾತ್ಮಕವಾಗಿದ್ದರೆ ಅದಕ್ಕೆ 'ಸಂಕೀರ್ಣ ದ್ವೈಧ' ಎಂದು ಹೆಸರು.

ಈ ಎಲ್ಲವನ್ನೂ ಸೇರಿಸಿದರೆ ದ್ವೈಧದಲ್ಲಿ ನಾಲ್ಕು ರೂಪಗಳು ಬರುತ್ತವೆ :

1. ಸರಳ ರಚನಾತ್ಮಕ ದ್ವೈಧ (Simple constructive dilemma)
2. ಸರಳ ಧ್ವಂಸಾತ್ಮಕ ದ್ವೈಧ (Simple destructive dilemma)
3. ಸಂಕೀರ್ಣ ರಚನಾತ್ಮಕ ದ್ವೈಧ (Complex constructive dilemma)
4. ಸಂಕೀರ್ಣ ಧ್ವಂಸಾತ್ಮಕ ದ್ವೈಧ (Complex destructive dilemma)

ಈ ಎಲ್ಲ ರೂಪದ ದ್ವೈಧ ಅನುಮಾನಗಳಿಗೂ ಸಂಜ್ಞಾರೂಪದಲ್ಲಿ ವಿಸ್ತೃತ ರೂಪ ಲ್ಲಿ ಉದಾಹರಣೆಗಳನ್ನು ನೀಡಬಹುದು.

**ರಳ ರಚನಾತ್ಮಕ ದ್ವೈಧ**

A ಯು B ಆಗಿದ್ದರೆ, C ಯು D ಆಗುತ್ತದೆ ; ಹಾಗೆಯೇ E ಯು F ಗಿದ್ದರೆ C ಯು D ಆಗುತ್ತದೆ.

A ಯು B ಆಗಿದೆ ಅಥವಾ E ಯು F ಆಗಿದೆ
ಆದ್ದರಿಂದ C ಯು D ಆಗಿದೆ.

ಯಾರಾದರೂ ತನ್ನ ಬುದ್ಧಿಯ ನೇರಕ್ಕೆ ನಡೆದುಕೊಂಡರೆ, ವಿಮರ್ಶೆಗೆ ಈಡಾಗುತ್ತಾನೆ; ಹಾಗೆಯೇ, ಇತರರ ಉಪದೇಶಕ್ಕೆ ಒಳಗಾದರೂ ವಿಮರ್ಶೆಗೆ ಈಡಾಗುತ್ತಾನೆ.

ಇವನು ತನ್ನ ಬುದ್ಧಿಯ ನೇರಕ್ಕ ನಡೆದಿದ್ದಾನೆ ಅಥವಾ ಇತರರ ಉಪದೇಶಕ್ಕೆ ಒಳಗಾಗಿದ್ದಾನೆ.

ಆದ್ದರಿಂದ ವಿಮರ್ಶೆಗೆ ಈಡಾಗುತ್ತಾನೆ.

**ಸರಳ ಧ್ವಂಸಾತ್ಮಕ ದ್ವೈಧ**

A ಯು B ಆಗಿದ್ದರೆ C ಯು D ಆಗುತ್ತದೆ; ಹಾಗೆಯೇ A ಯು B ಆಗಿದ್ದರೆ E ಯು F ಆಗುತ್ತದೆ.

C ಯು D ಆಗಿಲ್ಲ, ಅಥವಾ E ಯು F ಆಗಿಲ್ಲ.

ಆದ್ದರಿಂದ A ಯು B ಆಗಿಲ್ಲ.

ಒಂದು ವಸ್ತು ಚಲಿಸಬೇಕಾದರೆ ತಾನಿರುವ ಕಡೆ ಚಲಿಸಬೇಕು; ಹಾಗೆಯೇ ಒಂದು ವಸ್ತು ಚಲಿಸಬೇಕಾದರೆ ತಾನಿಲ್ಲದ ಕಡೆ ಚಲಿಸಬೇಕು.

ಅದು ತಾನಿರುವ ಕಡೆ ಚಲಿಸುವುದಿಲ್ಲ, ತಾನಿಲ್ಲದ ಕಡೆಯೂ ಚಲಿಸುವುದಿಲ್ಲ.

ಗೃಹೀತವಾಕ್ಯ

ಆದ್ದರಿಂದ ವಸ್ತುವಿಗೆ ಚಲನೆಯೇ ಇಲ್ಲ. ನಿರ್ಣಯ ವಾಕ್ಯ

**ಸಂಕೀರ್ಣ ರಚನಾತ್ಮಕ ದ್ವೈಧ**

A ಯು B ಆಗಿದ್ದರೆ C ಯು D ಆಗುತ್ತದೆ; ಹಾಗೆಯೇ E ಯು F ಆಗಿದ್ದರೆ G ಯು H ಆಗುತ್ತದೆ.

A ಯು B ಆಗಿದೆ ಅಥವಾ E ಯು F ಆಗಿದೆ.

ಆದ್ದರಿಂದ C ಯು D ಆಗಿದೆ ಅಥವಾ G ಯು H ಆಗಿದೆ.

ಈ ಗ್ರಂಥಗಳು ಕುರಾನ್ ಜತೆಗೆ ಸಮ್ಮತ ಹೊಂದಿದ್ದರೆ, ಅವುಗಳ ಉಪಯೋಗ ಹೆಚ್ಚಿಲ್ಲ; ಹಾಗೆಯೇ ಅವುಗಳು ಕುರಾನ್‌ಗೆ ವಿರೋಧವಾಗಿದ್ದರೆ, ಅವು ಅಪಾಯಕಾರಿ.

ಈ ಗ್ರಂಥಗಳು ಕುರಾನ್ ಜತೆಗೆ ಸಮ್ಮತ ಹೊಂದಿವೆ ಅಥವಾ ವಿರೋಧವಾಗಿವೆ.

ಗೃಹೀತ ವಾಕ್ಯ

ಆದ್ದರಿಂದ ಅವುಗಳ ಉಪಯೋಗ ಹೆಚ್ಚಿಲ್ಲ ಅಥವಾ ಅವು ಅಪಾಯಕಾರಿ. (ಅದನ್ನು ಸುಡಬಹುದು !) ನಿರ್ಣಯ ವಾಕ್ಯ

**ಂಕೀರ್ಣ ಧ್ವಂಸಾತ್ಮಕ ದ್ವೈಧ**

A ಯು B ಆಗಿದ್ದರೆ, C ಯು D ಆಗುತ್ತದೆ ; ಹಾಗೆಯೇ E ಯು F ಆಗಿದ್ದರೆ ಯು H ಆಗುತ್ತದೆ.

C ಯು D ಆಗಿಲ್ಲ ಅಥವಾ G ಯು H ಆಗಿಲ್ಲ.

ಆದ್ದರಿಂದ A ಯು B ಆಗಿಲ್ಲ ಅಥವಾ E ಯು H ಆಗಿಲ್ಲ.

ಒಬ್ಬನು ಕರ್ತವ್ಯನಿಷ್ಠನಾಗಿದ್ದರೆ ಆಜ್ಞೆಯನ್ನು ಪಾಲಿಸುತ್ತಾನೆ ; ಹಾಗೆಯೇ ಬುದ್ಧಿಂತನಾಗಿದ್ದರೆ ಅರ್ಥಮಾಡಿಕೊಳ್ಳುತ್ತಾನೆ.

ಈತನು ಆಜ್ಞೆಯನ್ನು ಪಾಲಿಸುತ್ತಿಲ್ಲ, ಅರ್ಥವನ್ನೂ ಮಾಡಿಕೊಳ್ಳುತ್ತಿಲ್ಲ.

ಗೃಹೀತ ವಾಕ್ಯಗಳು

ಆದ್ದರಿಂದ ಈತನು ಕರ್ತವ್ಯನಿಷ್ಠನಲ್ಲ ಅಥವಾ ಬುದ್ಧಿವಂತನಲ್ಲ.

ನಿರ್ಣಯ ವಾಕ್ಯ

ಹೀಗೆ ನಿಗಮನ ರೂಪದಲ್ಲಿ ವ್ಯವಹಿತ ಅನುಮಾನದ ಮುಖ್ಯರೀತಿಯ ಅನ್ಯಾನ ಕ್ರಮಗಳನ್ನು ನೋಡಿದ್ದೇವೆ. ಇವುಗಳೆಲ್ಲದರಲ್ಲೂ ಅನುಮಾನವು ಮೂರು ವಾಕುಳಿಂದ ಅಭಿವ್ಯಕ್ತಗೊಂಡಿದ್ದು ಪೂರ್ಣರೂಪದಲ್ಲಿ ಇರುವಂತಹವು. ಆದರೆ ವ್ಯವಹಿತ ನುಮಾನವು ಸಂಕ್ಷಿಪ್ತ ರೂಪದಲ್ಲೂ ಅಥವಾ ಸಂಯುಕ್ತ ರೂಪದಲ್ಲೂ ಇರಬಹುದು. ದಾಹರಣೆಗೆ ನಿರಪೇಕ್ಷ ವ್ಯವಹಿತ ಅನುಮಾನದಲ್ಲಿ ಎರಡೇ ವಾಕ್ಯಗಳನ್ನು ಅಭಿವ್ಯಕ್ತ ಾಡಿ ಮೂರನೆಯದನ್ನು ಕೇಳುವವನ ಊಹೆಗೆ ಬಿಡಬಹುದು. ಹೀಗೆ ಸೂಚ್ಯವಾಗಿರು ಂತ ಎರಡೇ ವಾಕ್ಯಗಳ ನಿರಪೇಕ್ಷ ವ್ಯವಹಿತ ಅನುಮಾನಕ್ಕೆ **'ಸಂಕ್ಷಿಪ್ತ ನಿರಪೇಕ್ಷ ನುಮಾನ'** (Enthememe) ಎನ್ನುತ್ತಾರೆ.

ಹಾಗೆಯೇ ಮೂರು ವಾಕ್ಯಗಳಿಗೇ ನಿಲ್ಲಿಸದೆ ಅನುಮಾನ ಕ್ರಮವನ್ನು ನಾಲ್ಕು ಥವಾ ಅದಕ್ಕಿಂತ ಹೆಚ್ಚಿನ ವಾಕ್ಯಗಳಲ್ಲಿ ಹೇಳಬಹುದು. ಇನಕ್ಕೆ **'ಸಂಯುಕ್ತ ಅನು ಾನ'** ಎನ್ನುತ್ತಾರೆ.

ಈ ಮೇಲಿನ ಎರಡೂ ಕ್ರಮಗಳನ್ನು ಬಳಸಿಕೊಂಡು ವಾದವನ್ನು ಮಾಡಬಹುದು. ದರೆ ಈ ರೀತಿಯ ಅನುಮಾನ ಕ್ರಮಗಳನ್ನು ಈ ಗ್ರಂಥದಲ್ಲಿ ವಿವರಿಸುವ ಉದ್ದೇಶ ಲ್ಲ. ಆಸಕ್ತಿಯುಳ್ಳ ವಿದ್ಯಾರ್ಥಿಗಳು ತರ್ಕಶಾಸ್ತ್ರದ ಅಧ್ಯಯನವನ್ನು ಮುಂದುವರಿಸಿ ವನ್ನೆಲ್ಲಾ ತಿಳಿಯಬಹುದು.

ಅಷ್ಟೇ ಅಲ್ಲದೆ, ಆಧುನಿಕ ತಾರ್ಕಿಕರು ಬೆಳಸಿರುವ ವಿಚಾರದ ಧಾಟಿಯಲ್ಲಿ ರ್ಕಿಕ ವಾಕ್ಯದ ವರ್ಗೀಕರಣವನ್ನು ಬೇರೆ ರೀತಿಯಲ್ಲೂ ಹೇಗೆ ಮಾಡಬಹುದೆಂಬು ನ್ನೂ ಗಮನಿಸಬಹುದು.

# ಪಾರಿಭಾಷಿಕ ಶಬ್ದಗಳು

Absolute term : ನಿರಪೇಕ್ಷಪದ
Abstract term: ಮಾನಸಿಕ (ಅಮೂರ್ತ) ಪದ
Accidens : ತಾತ್ಕಾಲಿಕ ವಿಶೇಷಣ
Affirming the antecedent : ಕಾರಣಾಂಗದ ಅಂಗೀಕಾರ
Affirming the consequent : ಕಾರ್ಯಾಂಗದ ಅಂಗೀಕಾರ ದೋಷ
Ambiguous major : ದ್ವಂದ್ವಾರ್ಥ ಸಾಧ್ಯಪದ
Ambiguous middle : ದ್ವಂದ್ವಾರ್ಥ ಮಧ್ಯಮ ಪದ
Ambiguous minor : ದ್ವಂದ್ವಾರ್ಥ ಪಕ್ಷಪದ
Antecedent : ಕಾರಣಾಂಗ ಅಥವಾ ಪೂರ್ವಾಂಗ
Casual relation : ಕಾರ್ಯ ಕಾರಣ ಭಾವ
Categorical : ನಿರಪೇಕ್ಷ
Categorical proposition : ನಿರಪೇಕ್ಷ ವಾಕ್ಯ
Circle in definition : ನಿರೂಪಣೆಯಲ್ಲಿನ ವೃತ್ತ
Class : ವರ್ಗ
Collective term : ಸಮಷ್ಟಿ, ಸಮುದಾಯ ಸೂಚಕ ಪದ
Common thinking : ಲಘು ಆಲೋಚನೆ
Complex dilemma : ಸಂಕೀರ್ಣ ಪದ ದ್ವೈಧ
Complex term : ಸಂಕೀರ್ಣ ಪದ
Conclusion: ಅನುಮಿತಿ, ನಿರ್ಣಯ ವಾಕ್ಯ
Concept : ಕಲ್ಪನೆ
Connotation : ಗುಣ, ವಿಶೇಷಣ
Connotative : ಸಗುಣ-ವಸ್ತುವಾಚಕ
Concrete : ಪೂರ್ಣತ್ವ, ಸ್ಥೂಲ ವ್ಯವಸ್ಥೆ
Concrete term: ಸ್ಥೂಲ (ಮೂರ್ತ) ಪದ
Consequent : ಕಾರ್ಯಾಂಗ ಅಥವಾ ಉತ್ತರಾಂಗ
Constructive dilemma : ರಚನಾತ್ಮಕ ದ್ವೈಧ
Contrary : ವಿರುದ್ಧ
Contradictory : ವ್ಯಾಘಾತಕ
Contrary opposition : ವಿಪರೀತ-ವಿರೋಧ ಸಂಬಂಧ
Convese or Inverse proposition: ಅನುಲೋಮ-ಪ್ರತಿಲೋಮಪ್ರಮಾಣ ಸಂಬಂಧ
Conversion : ಪರಿವರ್ತನೆ
Conversion par accidens : ತಾತ್ಕಾಲಿಕ ಪರಿವರ್ತನೆ
Copula ; ಸಂಯೋಗಿಕ ಪದ
Cross division : ಸಂಕರ ವಿಭಜನೆ
Deduction : ನಿಗಮನ
Deductive inference : ನಿಗಮನ ಅನುಮಾನ
Deductive logic : ನಿಗಮನ ತರ್ಕ
Deductive Truth : ನಿಗಮನ ಸತ್ಯ
Definition : ನಿರೂಪಣೆ
Denotation : ವಸ್ತು ಅಥವಾ ಸಂಖ್ಯಾ ಸೂಚಕ ಪದ, ವಿಶೇಷ್ಯ, ವಸ್ತು, ಸಂಖ್ಯಾ ದೃಷ್ಟಿಯಿಂದ ಎಣಿಸಬಹುದಾದದ್ದು
Denying the antecedent : ಕಾರಣಾಂಗದ ನಿರಾಕರಣೆ ದೋಷ

nying the consequent : ಕಾರ್ಯಾಂಗದ ನಿರಾಕರಣೆ
scription : ವಿವರಣೆ
structive dilemma : ಧ್ವಂಸಾತ್ಮಕ ದ್ವೈಧ
alectics : ತರ್ಕ, ವಾದ
chotomy : ದ್ವಿಧಾಕರಣೆ, ದ್ವಿಭಜನೆ
fferentia : ನಿರ್ಣಾಯಕ-ವಿಶೇಷಣ
lemma : ಅನುಮಾನ, ದ್ವೈಧ
scrimination : ವಿವೇಚನೆ
sjunctive : ಪರ್ಯಾಯಾತ್ಮಕ, ವೈಕಲ್ಪಿಕ
sjunctive syllogism: ಪರ್ಯಾಯಾತ್ಮಕ ವ್ಯವಹಿತ ಅನುಮಾನ
stribution : ವ್ಯಾಪ್ತಿ
stributive term : ವ್ಯಷ್ಟಿ ಪದ
vision : ವಿಭಜನೆ
uction : ವಿವಕ್ಷಿತ ಅನುಮಾನ
thymeme : ಸಂಕ್ಷಿಪ್ತ ಅನುಮಾನ
idence : ದೃಷ್ಟಾಂತ ನಿದರ್ಶನ
ceptive sentence : ಅಪವಾದ ವಾಕ್ಯ
clusive sentence : ಬಾಧಕ ವಾಕ್ಯ
clusive alternatives : ನಿಶ್ಶೇಷ ಪರ್ಯಾಯಗಳು
periment : ಪರೀಕ್ಷಣಾಕ್ರಮ, ಪ್ರಯೋಗ
tension : ವಸ್ತುವ್ಯಾಪ್ತಿ
llacy of four terms : ನಾಲ್ಕು ಪದಗಳ ದೋಷ
llacy of negative premises : ನಿಷೇಧಾತ್ಮಕ ವಾಕ್ಯಗಳ ದೋಷ
gurative definition : ಉಪಮಾ-ನಿರೂಪಣೆ
gures of syllogism : ವ್ಯವಹಿತ ಅನುಮಾನದ 'ಪ್ರತಿಮಾ' ರೂಪಗಳು

Form : ಆಕಾರ, ರೂಪ
Formal consistency : ರೂಪ ಅಥವಾ ನಿಯಮ ಸಂವಾದ
Formal logic : ರೂಪ ಸಾಪೇಕ್ಷ ತರ್ಕ
Formal Truth : ರೂಪ-ಸತ್ಯ, ರೂಪ ಸಾಪೇಕ್ಷ ಸತ್ಯ
Fundamentum divisionis : 'ವಿಭಜನಾ ಆಧಾರ'
General term : ಸಾಮಾನ್ಯಪದ
Generic property : ಜಾತಿ-ಉಪಲಬ್ಧ ವಿಶೇಷಣ
Genus : ಜಾತಿ
Hyphothetical : ಉಪಕಲ್ಪನೆ, ಸಾಪೇಕ್ಷ
Hypothetical major : ಔಪಾಧಿಕ ಗೃಹೀತ ವಾಕ್ಯ
Hypothetical proposition : ಔಪಾಧಿಕ, ಕಾಲ್ಪನಿಕ ವಾಕ್ಯ, ನಿಯಮಾತ್ಮಕ
Idea : ಕಲ್ಪನೆ, ಭಾವ
Illicit major : ಸಾಧ್ಯಪದದ ಅತಿವ್ಯಾಪ್ತಿ
Illicit minor : ಪಕ್ಷಪದದ ಅತಿವ್ಯಾಪ್ತಿ
Illicit process : ಅತಿವ್ಯಾಪ್ತಿ, ಕಾರಣರಹಿತ ವ್ಯಾಪ್ತಿ
Immediate inference : ನೇರ ಅಥವಾ ಪ್ರತ್ಯಕ್ಷ ಅನುಮಾನ
Inclusive alternatives : ಅಂತರ್ಗತ ಪರ್ಯಾಯಗಳು
Indian Logic : ಅನ್ವೀಕ್ಷಕೀ, ತರ್ಕಶಾಸ್ತ್ರ, ನ್ಯಾಯದರ್ಶನ, ನ್ಯಾಯವಿಸ್ತರ, ಪ್ರಮಾಣಶಾಸ್ತ್ರ
Induction : ವಿಗಮನ
Inductive Inference : ವಿಗಮನ ಅನುಮಾನ
Inductive logic : ವಿಗಮನ ತರ್ಕ
Inference : ಅನುಮಾನ

Infirma Species : ನಿಕೃಷ್ಟ ಜಾತಿ–ವಿಶೇಷಣ

Intension : ಆಂತರಿಕ ಗುಣ

Invariable relation : ನಿತ್ಯ ಅಥವಾ ಅನಿವಾರ್ಯ ಸಂಬಂಧ

Judgment : ನಿರ್ಣಯ

Logic : ತರ್ಕ, ವಿಚಾರ

Logic of Consistency : ಸಾಂಗತ್ಯ ತರ್ಕ, ವಿಚಾರಸಾಂಗತ್ಯ

Logic of Demonstration: ನಿರ್ಣಯಾತ್ಮಕ ತರ್ಕ

Logic of Discovery : ಶೋಧನಾತ್ಮಕ ತರ್ಕ

Logic of Proof : ನಿರ್ಣಯಾತ್ಮಕ ತರ್ಕ

Logical definition : ತಾರ್ಕಿಕ ನಿರೂಪಣೆ

Logical division : ತಾರ್ಕಿಕ ವಿಭಜನೆ

Logical propositions : ತಾರ್ಕಿಕ ವಾಕ್ಯ

Major premise : ಸಾಧ್ಯವಾಕ್ಯ

Major term : ಸಾಧ್ಯಪದ

Material consistency : ವಸ್ತು ಸಂವಾದ, ವಸ್ತುಸಾಂಗತ್ಯ

Material logic : ವಸ್ತು ಸಾಪೇಕ್ಷ ತರ್ಕ

Material truth : ವಾಸ್ತವಿಕ ಸತ್ಯ

Mediate inference : ಬಳಸು ಅಥವಾ ಮಧ್ಯಮಾನುವರ್ತಿ(ಪರೋಕ್ಷ)ಅನುಮಾನ

Metaphysical division : ತಾತ್ವಿಕ ವಿಭಜನೆ

Middle term : ಮಧ್ಯಮಪದ

Minor premise ಪಕ್ಷ ವಾಕ್ಯ

Minor term : ಪಕ್ಷಪದ

Mixed syllogism : ಮಿಶ್ರ ಮಧ್ಯಮಾನುವರ್ತಿ ಅನುಮಾನ, ಮಿಸ್ರವ್ಯವಹಿತ ಅನುಮಾನ

Modern Logic : ಆಧುನಿಕ ತರ್ಕ

Modus Ponens : ಅಂಗೀಕಾರದ ನಿಲವು

Modus Ponendo Tollens: ಅಂಗೀಕಾರ ಮೂಲವಾದ ನಿರಾಕರಣೆಯ ನಿಲವು

Modus Tollens: ನಿರಾಕರಣೆಯ ನಿಲವು

Modus Tollendo Ponens : ನಿರಾಕರಣ ಮೂಲವಾದ ಅಂಗೀಕಾರದ ನಿಲವು

Negative term : ಅಭಾವಾತ್ಮಕ ಪದ, ನಿಷೇಧಾತ್ಮಕ ಪದ

Non-connotative ; ಅಗುಣ_ಅವಸ್ತು ವಾಚಕ

Normative Science : ಧ್ಯೇಯವಾದಿ ಶಾಸ್ತ್ರಗಳು

Non-significant singular : ವಿಶಿಷ್ಟ ರಹಿತ ಏಕವಾಚಕ

Obscure definition : ಅಸ್ಪಷ್ಟ ನಿರೂಪಣೆ

Observation : ವೀಕ್ಷಣ

Obversion : ಪ್ರತಿವರ್ತನೆ

Opposition of propositions : ತಾರ್ಕಿಕ ವಾಕ್ಯಗಳ 'ವಿರೋಧ ಸಂಬಂಧ'

Overlapping division : ಅಂತರ್ಭೂತ ವಿಭಜನೆ

Perfect figure : ಪರಿಪೂರ್ಣ ಪ್ರತಿಮಾ

Physical division : ಭೌತಿಕ ವಿಭಜನೆ

Polly Syllogism: ಸಂಯುಕ್ತ ಅನುಮಾನ

Positive : ಭಾವಾತ್ಮಕ

Positive or Natural Science : ಭೌತಿಕ ವಿಜ್ಞಾನ

Predicable : ಅಭಿಧೇಯ

Predicate : ವಿಶೇಷಣ ಪದ

Premise : ಆಧಾರ ವಾಕ್ಯ, ಗೃಹೀತ ವಾಕ್ಯ

Privative term : ತಾತ್ಕಾಲಿಕ ಭಾವಪದ

Proper name : ಅಂಕಿತನಾಮ, ವಾಚಕ

Property or Proprium : ಉಪಲಬ್ಧ ವಿಶೇಷಣ

Proposition : ತಾರ್ಕಿಕ ವಾಕ್ಯ

Pure Syllogism : ಶುದ್ಧ ಮಧ್ಯಮಾನುವರ್ತಿ (ವ್ಯವಹಿತ) ಅನುಮಾನ
Reasoning : ವಿಚಾರ, ವಿವೇಚನೆ
Redundant definition : ಪುನರುಕ್ತ-ನಿರೂಪಣೆ
Reflection : ಮನನ
Relative term : ಸಾಪೇಕ್ಷಪದ
Science of Valid Thinking : ಪ್ರಮಾಣಶಾಸ್ತ್ರ
Scientific Study : ವ್ಯವಸ್ಥಿತ ಅಧ್ಯಯನ, ವೈಜ್ಞಾನಿಕ ಅಧ್ಯಯನ
Significant singular : ವಿಶಿಷ್ಟಪೂರ್ಣ ಏಕವಾಚಕ
Simple apprehension : ಸಾಧಾರಣ ಗ್ರಹಣ
Simple conversion : ಸರಳ ಪರಿವರ್ತನೆ
Simple dilemma : ಸರಳ ದ್ವೈಧ
Simple term : ಸರಳ ಪದ
Singular term : ಏಕ ಪದ
Species : ಜಾತಿ ವಿಶೇಷಣ
Specific property : ಶುದ್ಧ ಉಪಲಬ್ಧ ವಿಶೇಷಣ
Sub class : ಉಪವರ್ಗ
Sub contrary opposition ಅನುವಿಪರೀತ-ವಿರೋಧ ಸಂಬಂಧ
Subject : ಉದ್ದೇಶ್ಯ ಪದ
Summum genus : ಸರ್ವೋತ್ಕೃಷ್ಟ ಜಾತಿ
Syllogism : (ವ್ಯವಹಿತ) ಮಧ್ಯಮಾನುವರ್ತಿ ಅನುಮಾನ
Syllogistic Logic : ಅವಯವ ತರ್ಕ
Synonymous definition : ಸಮಾನಾರ್ಥಕ ನಿರೂಪಣೆ
Thinking : ವಿಚಾರ
Too-narrow definition : ಸಂಕುಚಿತ-ನಿರೂಪಣೆ
Too-wide definition : ಅತೀವ-ನಿರೂಪಣೆ
Traditional Logic : ಸಾಂಪ್ರದಾಯಿಕ ತರ್ಕ
Truth : ಸತ್ಯ, ಪ್ರಮಾ
Undistributed middle : ಮಧ್ಯಮ ಪದದ ಅವ್ಯಾಪ್ತಿ
Undistribution : ಅವ್ಯಾಪ್ತ
Universal experience : ವಿಸ್ತಾರ ಅನುಭವ
Universe of discourse : ವಿಚಾರ ಕ್ಷೇತ್ರ

# ಕನ್ನಡ ಅಧ್ಯಯನ ಸಂಸ್ಥೆ

## ಪ್ರಿ-ಯೂನಿವರ್ಸಿಟಿ ಪಠ್ಯಪುಸ್ತಕಮಾಲೆ

1 ಸಂಕ್ಷಿಪ್ತ ವಿಶ್ವ ಇತಿಹಾಸ—ಆರ್. ಜಿ. ಶಿವಣ್ಣ ; ಎಚ್. ರಾಮಲಿಂಗಪ್ಪ
2 ಜೋಡಿ ದಾಖಲೆ ಪದ್ಧತಿ ಲೆಕ್ಕಬರಹ—ಡಿ. ಎನ್. ಶ್ರೀನಿವಾಸಮೂರ್ತಿ
3 ಸಮಾಜಶಾಸ್ತ್ರ ಪರಿಚಯ (ಭಾಗ ೧)—ಎಂ. ನಂಜಮ್ಮಣ್ಣಿ
4 ಪ್ರಾಣಿಶಾಸ್ತ್ರ ಪರಿಚಯ (ಭಾಗ ೧)—ಡಾ. ಎಚ್. ಬಿ. ದೇವರಾಜ ಸರ್ಕಾರ್
5 ರಸಾಯನಶಾಸ್ತ್ರ ಪರಿಚಯ (ಭಾಗ ೧)—ಎಚ್. ಜಿ. ಸುಬ್ಬರಾವ್
6 ವಾಣಿಜ್ಯಶಾಸ್ತ್ರ ಪರಿಚಯ (ಭಾಗ ೧)—ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್
7 ಜೀವಶಾಸ್ತ್ರ ಪರಿಚಯ (ಭಾಗ ೧)—ಡಾ. ಎಚ್.ಬಿ. ದೇವರಾಜ ಸರ್ಕಾರ್, ಡಾ. ಎನ್.ಬಿ. ಕೃಷ್ಣಮೂರ್ತಿ, ಸದಾನಂದ
8 ಅರ್ಥಶಾಸ್ತ್ರ ಪರಿಚಯ (ಭಾಗ ೧)—ಡಾ. ಜಿ.ಟಿ. ಹುಚ್ಚಪ್ಪ, ಎ.ಪಿ. ಶ್ರೀನಿವಾಸಮೂರ್ತಿ, ಡಾ. ಬಿ.ಎಸ್. ಶ್ರೀಕಂಠಾರಾಧ್ಯ
9 ಆಧುನಿಕ ತರ್ಕಶಾಸ್ತ್ರ ಪರಿಚಯ (ಭಾಗ ೧)—ಡಾ. ಕೆ.ಬಿ. ರಾಮಕೃಷ್ಣರಾವ್

### ಸಿದ್ಧತೆಯ ವಿವಿಧ ಹಂತಗಳಲ್ಲಿ

1 ಭೌತಶಾಸ್ತ್ರ ಪರಿಚಯ (ಭಾಗ ೧)
2 ಗಣಿತಶಾಸ್ತ್ರ ಪರಿಚಯ (ಭಾಗ ೧)
3 ಸಸ್ಯಶಾಸ್ತ್ರ ಪರಿಚಯ (ಭಾಗ ೧)
4 ರಾಜ್ಯಶಾಸ್ತ್ರ ಪರಿಚಯ (ಭಾಗ ೧)
5 ಭೂಗೋಳಶಾಸ್ತ್ರ ಪರಿಚಯ (ಭಾಗ ೧)
6 ಭೂವಿಜ್ಞಾನ ಪರಿಚಯ (ಭಾಗ ೧)
7 ಮನಃಶಾಸ್ತ್ರ ಪರಿಚಯ (ಭಾಗ ೧)
8 ಸಂಖ್ಯಾಶಾಸ್ತ್ರ ಪರಿಚಯ (ಭಾಗ ೧)